# ವೀರಶೈವ ದರ್ಶನ ಮೀಮಾಂಸೆ

ಸಂ-೧

ಡಾ. ವ್ಹಿ. ಎಸ್. ಕಂಬಿ
ರೀಡರ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ



ಶ್ರೀವಿದ್ಯಾ ಪ್ರಕಾಶನ, ಧಾರವಾಡ-೭

# ವೀರಶೈವದರ್ಶನ ಮೀಮಾಂಸೆ

ಸಂ. ೪

ಲೇಖಕರು :

ಡಾ|| ಎಸ್. ಎಸ್. ಕಂಬಿ

# ಮುನ್ನುಡಿ

ಡಾ||. ವ್ಹಿ. ಎಸ್. ಕಂಬಿ ಅವರ ಇತ್ತೀಚಿನ ಐದು ಪ್ರಬಂಧಗಳ ಸಂಕಲನಗ್ರಂಥವನ್ನು ಓದಿ ಸಂತೋಷ ಪಟ್ಟಿದ್ದೇನೆ. ವೀರಶೈವ ವಚನಸಾಹಿತ್ಯದಲ್ಲಿ ಕಾವ್ಯದೃಷ್ಟಿಯ ಚೆಲುವನ್ನು ಮೆಚ್ಚಿಪ್ರಬಂಧ ಬರೆದ ಮಹನೀಯರಿದ್ದಾರೆ. ಅದರ ಸಾಮಾಜಿಕ–ವೈಚಾರಿಕ ಕ್ರಾಂತಿಯನ್ನು ಬಣ್ಣಿಸಿದವರೂ ಇದ್ದಾರೆ. ಆದರೆ ನಿಜವಾಗಿ ಅದರ ಸಾರಸಾರಾಯವಾದ ಆಧ್ಯಾತ್ಮ ಬೋಧೆಯನ್ನು ಕುರಿತ ಮೂಲಭೂತ ಪ್ರಕ್ರಿಯೆ–ಪರಿಕಲ್ಪನೆಗಳ ಪರಿಶೀಲನೆ ಇನ್ನೂ ನಡೆಯಬೇಕಾಗಿದೆಯೆಂಬುದನ್ನು ವಿದ್ವಾಂಸರು–ವಿಶೇಷತಃ ಭಾರತೀಯ ತತ್ತ್ವಶಾಸ್ತ್ರದಲ್ಲಿ ಪರಿಣತರು–ಮನಗಂಡಿದ್ದಾರೆ. 'ದರ್ಶನ', 'ಅನುಭವ', 'ಅನುಭಾ', 'ಪ್ರಸಂಗ', 'ಅಂಗ', 'ಲಿಂಗ', 'ಪ್ರಮಾಣು', 'ಸಂಪಾದನೆ', 'ಸಾಮರಸ್ಯ', 'ಭಕ್ತಿ'–ಇವೇ ಮುಂತಾದವು ಬರಿಯ ಶಬ್ದಕೋಶದ ಕೆಲವು ಪದಗಳಲ್ಲ. ವಚನವಾಙ್ಮಯದಲ್ಲಿ ಇವಕ್ಕೆ ಬಹು ವಿಶಿಷ್ಟವೂ ವಿಶಾಲವೂ ಆದ ಅರ್ಥವ್ಯಾಪ್ತಿಯಿದೆ. ಅದನ್ನು ಅರಿತು ವಿಶ್ಲೇಷಿಸಿ ಅರುಹಲು ಡಾ. ಕಂಬಿ ಅವರು ಇಂದಿನ ಭಾರತೀಯ ತತ್ತ್ವಶಾಸ್ತ್ರವನ್ನು ಕುರಿತು ಆಧುನಿಕ ಸಂಶೋಧಕರ ಮಾರ್ಗವನ್ನು ಅಳವಡಿಸಿಕೊಂಡು ಈ ಐದು ಪ್ರಬಂಧಗಳಲ್ಲಿ ಒಂದು ಉತ್ತಮವಾದ ಹಾಗೂ ಮಹತ್ತ್ವವಾದ ತತ್ತ್ವಶಾಸ್ತ್ರೀಯ ಹಿನ್ನೆಲೆಯನ್ನು ಅಥವ ಭೂಮಿಕೆಯನ್ನು ಅಣಿಗೊಳಿಸಿದ್ದಾರೆ. ಈ ಗಟ್ಟಿಯಾದ ತಳಪಾಯದ ಮೇಲೆ ಅವರು ಇನ್ನೂ ದೊಡ್ಡ ತತ್ತ್ವಜ್ಞಾನದ ಸೌಧವನ್ನು ನಿರ್ಮಿಸಿಯಾರೆಂಬ ಭರವಸೆ ನನಗಿದೆ.

ಪ್ರತಿ ಪ್ರಬಂಧದಲ್ಲೂ ಅವರಿಗಿರುವ ವೀರಶೈವ ಪಾರಿಭಾಷಿಕ ಕಲ್ಪನೆಗಳ ಗಾಢ ಪರಿಚಯ ಹಾಗು ತತ್ತ್ವಶಾಸ್ತ್ರದ ಪರಿಶೀಲನಾ ಪ್ರಕ್ರಿಯೆಯ ಪೂರ್ಣ ಪರಿಜ್ಞಾನಗಳು ಅಭಿವ್ಯಕ್ತವಾಗುತ್ತವೆ. ನಿಜವಾಗಿ ವೀರಶೈವ "ಅನುಭಾವ"ದ "ಪ್ರಸಂಗ"ದ ಮಹಿಮೆಯನ್ನು ನಾವು ಪೂರ್ಣವಾಗಿ ತಿಳಿಯಲು ಡಾ. ಕಂಬಿಯವರಂತಹ ತತ್ತ್ವಶಾಸ್ತ್ರ ಪರಿಣತರು ಹೆಚ್ಚು ಹೆಚ್ಚಾಗಿ ಕನ್ನಡದಲ್ಲಿ ವಿಚಾರಗಳನ್ನು ವ್ಯಕ್ತಪಡಿಸಬೇಕು. ಇಂತಹ ಸತ್‌ಪ್ರಯತ್ನಕ್ಕೆ ನಾಡಿನ ವಿದ್ಯಾವಂತರು ಎಲ್ಲ ಪ್ರೋತ್ಸಾಹ ನೀಡಲೆಂದು ಹಾರೈಸುತ್ತೇನೆ.

ಜುಲೈ ೧೨–೮–೧೯೮೬ ಡಾ. ಕೆ. ಕೃಷ್ಣಮೂರ್ತಿ

# ಶ್ರೀ ಎಸ್. ಕೆ. ಅವರು

ಭಾರತದ ಸ್ವಾತಂತ್ರ್ಯಪೂರ್ವದಲ್ಲಿ ಗ್ರಾಮೀಣ ಭಾರತೀಯರಿಗೆ. ಅದರಲ್ಲೂ ಮಧ್ಯಮ ವರ್ಗದ ಕೆಳವರ್ಗದ ಮಕ್ಕಳಿಗೆ ಶಿಕ್ಷಣವೆಂಬುದು ಕೈಗೆ ಟುಕದ ವಿಷಯವಾಗಿತ್ತು. ಶಿಕ್ಷಣದಿಂದ ಲಭ್ಯವಾಗುವ ಸುಖ ಸೌಕರ್ಯಗಳು ಮತ್ತು ಉಚ್ಚ ಸ್ಥಾನಮಾನಗಳು ಅವರ ಕನಸಿನ ವಿಷಯಗಳು ಕೂಡ ಆಗಿರ ಲಿಲ್ಲ. ಇವೆಲ್ಲ ಕೇವಲ ಶ್ರೀಮಂತರ ಸೊತ್ತುಗಳಾಗಿದ್ದವು. ಅದೇಕೆ ನಗರ ಗಳಲ್ಲಿ ಹಾಗೂ ಪಟ್ಟಣಗಳಲ್ಲಿದ್ದ ಈ ವರ್ಗಗಳ ಮಕ್ಕಳು ಸಹಿತ ಅವುಗಳಿಂದ ವಂಚಿತರಾಗಿದ್ದರೆಂದರೆ ಅತಿಶಯೋಕ್ತಿಯೇನಲ್ಲ. ಅವರಿಗೆ ಮಾಧ್ಯಮಿಕ ಶಾಲೆಯ ಶಿಕ್ಷಣವನ್ನು ಕೂಡ ಪೂರ್ಣಗೊಳಿಸುವುದು ಕಷ್ಟಸಾಧ್ಯವಾಗಿತ್ತು. ಪ್ರಾಥಮಿಕ ಶಿಕ್ಷಣವನ್ನು ಪಡೆಯುವದೇ ಒಂದು ಮಹತ್‌ಸಾಧನೆ ಎಂದು ಪರಿಗಣಿಸಲ್ಪಡುತ್ತಿದ್ದ ಕಾಲ. ಇಂಥ ಪರಿಸರದಲ್ಲಿ ಶ್ರೀಯುತರಾದ ಎಸ್. ಕೆ. ಕುಂಬಾರ ಅವರು ಬೆಳಗಾಂವಿ ಜಿಲ್ಲೆಗೆ ಸೇರಿದ ಹುಕ್ಕೇರಿ ತಾಲೂಕಿನ ಯಮಕನಮರ್ಡಿ ನಗರದಲ್ಲಿ ೧, ಜೂನ ೧೯೩೦ ರಲ್ಲಿ ಜನಿಸಿದರು. ಪ್ರಾಥ ಮಿಕ ಶಿಕ್ಷಣವನ್ನು ಅಲ್ಲಿಯೇ ಪಡೆವ ಅವಕಾಶವಿತ್ತು. ಅದನ್ನು ಅಲ್ಲಿಯೇ ಮುಗಿಸಿದರು. ಪ್ರಾಥಮಿಕ ೭ನೆಯ ವರ್ಗದ ಪರೀಕ್ಷೆಯಲ್ಲಿ ಶ್ರೀ ಎಸ್. ಕೆ. ಅವರು ಬೆಳಗಾಂವಿಯ ಕೇಂದ್ರಕ್ಕೆ ಪ್ರಪ್ರಥಮರಾಗಿ ಉತ್ತೀರ್ಣರಾದರು. ವಿದ್ಯಾಪ್ರೇಮಿಗಳು ಇವರ ಪ್ರತಿಭೆಗೆ ಮೆಚ್ಚುವಂತಾಯಿತು.

ಪ್ರಾಥಮಿಕ ಸಾರ್ವಜನಿಕ ಪರೀಕ್ಷೆಯ ಫಲಿತಾಂಶವು ಹಲವಾರು ಸಾಧನೆಗಳ ಕನಸನ್ನು ಶ್ರೀ ಎಸ್. ಕೆ. ಅವರು ಕಾಣಲು ಕಾರಣವಾಗಿದ್ದರೆ ಆಚ್ಚರಿಪಡಬೇಕಿಲ್ಲ. ಆ ಕನಸನ್ನು ನನಸುಮಾಡಿಕೊಳ್ಳುವಂಥ ಪ್ರತಿಭೆಯನ್ನ ವರು ಪಡೆದಿದ್ದರು. ಆದರೆ ಆರ್ಥಿಕ ದುರ್ಬಲತೆಯಿಂದ ಅವರು ಶಿಕ್ಷಣವನ್ನು ಮುಂದುವರಿಸದೆ ಸಾಂಪ್ರದಾಯಿಕವಾದ ಕುಂಬಾರ ಕಾಯಕದಲ್ಲಿ ತೊಡಗಿ ದರು. ಅಷ್ಟರಲ್ಲಿ ಅವರು ಪ್ರಾಥಮಿಕ ಶಿಕ್ಷಕರೆಂದು ನೇಮಗೊಂಡರು, ಸ್ವಾವಲಂಬಿಯಾದರು. ಅವರಲ್ಲಿದ್ದ ಸುಪ್ತವಿದ್ಯಾಸಂಪಾದನೆಯ ಆದಮ್ಯ

ಬಯಕೆಯು ಹೊರಹೊಮ್ಮಲು ಕಾಲುದಾರಿಯನ್ನು ನಿರ್ಮಿಸಿಕೊಳ್ಳುತ್ತಿತ್ತು ಒಳಗೊಳಗೆ. ಪ್ರಾಥಮಿಕ ಶಿಕ್ಷಕರಾಗಿದ್ದಾಗಲೆ ಅವರು ಮಾಧ್ಯಮಿಕ ಶಿಕ್ಷಣದಲ್ಲಿ ಆರನೆಯ ವರ್ಗವನ್ನು ಪಾಸಾದರು ಬಾಹ್ಯ ಪರೀಕ್ಷೆಗೆ ಕೂತುಕೊಳ್ಳುವ ಸೌಲಭ್ಯದ ಸದುಪಯೋಗ ಮಾಡಿಕೊಂಡು, ಅವರ ಪ್ರತಿಭೆಗೆ, ಶಿಕ್ಷಣ ಪ್ರೇಮಕ್ಕೆ ಈಗ ಕಂಗಳು ಮೂಡಿ ಗರಿಗಳು ಶಕ್ತಿಯುತವಾದವು. ಎಸ್.ಎಸ್. ಎಲ್.ಸಿ. ವರ್ಗದ ಅಧ್ಯಯನಕ್ಕಾಗಿ ಬೆಳಗಾಂವಿಯ ಜಿ. ಎ. ಹಾಯಸ್ಕೂಲ ದೆಡೆ ದೃಷ್ಟಿ ಹರಿಸಿದರು. ಪರಮಪೂಜ್ಯ ಶ್ರೀ ನಿ. ಪ್ರ. ಸ್ವರೂಪಿ ಶಿವ ಬಸವಸ್ವಾಮಿಗಳು ನಾಗನೂರ ಅವರ ಪ್ರಸಾದ ನಿಲಯದ ಆಶ್ರಯದಿಂದಾಗಿ ಉಚ್ಚ ಶಿಕ್ಷಣದೆಡೆ ದಾಪುಗಾಲ ಹಾಕತೊಡಗಿದರು ೧೯೪೯ರ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪಾಸಾಗಿ.

ಈಗ ತಾಂತ್ರಿಕ ಶಿಕ್ಷಣವನ್ನು ಪಡೆಯುವ ಚಿಂತನ ಮಾಡತೊಡಗಿ ಆರ್. ಎಲ್. ಎಸ್. ಸಂಸ್ಥೆಗೆ ಸೇರಿ ಇಂಟರ ಮಿಡಿಯೇಟ ಸಾಯನ್ಸ ವರ್ಗದ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪಾಸಾದರು. ಮುಂಬೈ ರಾಜ್ಯದಲ್ಲಿ ಅಂದು ಪ್ರಸಿದ್ಧವಾದ ಪುಣೆಯ ಇಂಜನಿಯರಿಂಗ ಕಾಲೇಜಿನಲ್ಲಿ ಪ್ರವೇಶವನ್ನು ಶ್ರೀ ಎಸ್. ಕೆ. ಅವರು ಪಡೆದು ೧೯೫೪ರಲ್ಲಿ ಬಿ. ಬಿ. ಪರೀಕ್ಷೆಯಲ್ಲಿ ದ್ವಿತೀಯ ಶ್ರೇಣಿಯನ್ನು ಸಂಪಾದಿಸಿ ಉತ್ತೀರ್ಣರಾದರು. ಪರೀಕ್ಷೆಯ ಪರಿಣಾಮ ದೊಡನೆ ಅಂದು ನೌಕರಿಯ ಆರ್ಡರ ಕೂಡ ದೊರೆಯುತ್ತಿತ್ತು. ಆ ಮೇರೆಗೆ ಶ್ರೀ ಎಸ್. ಕೆ. ಅವರು ಅಸಿಸ್ಟಂಟ ಇಂಜನೀಯರ (ಅಂದಿನ ಓವರಸೀಯರ) ಎಂದು ನೇಮಕಗೊಂಡರು.

ಪ್ರಸಾದನಿಲಯದಲ್ಲಿ ವಿದ್ಯಾರ್ಥಿಯಾಗಿರುವಾಗ ಅಲ್ಲಿಯ ಶಿಸ್ತು, ಸಂಯಮ, ಅಧ್ಯಯನ, ಮಿತವ್ಯಯದಕಟ್ಟುಪಾಡು, ಧಾರ್ಮಿಕ ಸಾಹಿತ್ಯಾದಿಗಳ ಚಟುವಟಿಕೆಗಳಿಂದ ಪ್ರೇರಿತರಾಗಿ ಸಚ್ಚಾರಿತ್ಯವನು ರೂಪಿಸಿಕೊಳ್ಳುವ ಅವರ ಉತ್ಕಟೇಚ್ಛೆಯು ಅವರಲ್ಲಿ ಪರಿಸ್ಪಂಧನಗೊಳುತ್ತಿತ್ತು ಪರಿಸರಕ್ಕೆ. ಇದು ಅವರ ಪ್ರತಿಭೆಯ ರನ್ನಕ್ಕೆ ದೊರೆತ ಚಿನ್ನದ ಕಟ್ಟು ಆಯಿತು.

ಬ್ರಿಟಿಶರ ಆಳ್ವಿಕೆಯ ಕಾಲದ ನೌಕರವರ್ಗ, ಪ್ರಜಾವರ್ಗ-ಇದು ಶೋಷಣೆಗೆ ಒಳಗಾದ ಸಮಾಜ, ಆಳರಸವರ್ಗ ಎಂಬ ಭೇದಗಳು ಸ್ವಾತಂತ್ರ್ಯಸಂಪಾನೇ ಜನಮನದಿಂದ ಮಾಯವಾಗತೊಡಗಿದ್ದವು. ಸ್ವಾತಂತ್ರ್ಯಸಂಗ್ರಾಮದ ಚೈತನ್ಯಾತ್ಮಕ ಸಂಘರ್ಷಮಯ, ಮುಕ್ತವಿಚಾರ ಅಭಿವ್ಯಕ್ತಿಯ ಪ್ರಚೋದನ ರಾಷ್ಟ್ರಸೇವಾಭಾವಮಯ ವಾತಾವರಣದಲ್ಲಿ ಬೆಳೆದುದು ಈಕಾಲದ ಯುವ ಜನಪೀಳಿಗೆ. ದಾಸ್ಯದ ಕತ್ತಲೆಯಿಂದ ಸ್ವಾತಂತ್ರ್ಯದ ಬೆಳಕಿನೆಡೆಗೆ ಧಾವಿಸುವ ಕ್ರಿಯಾಶೀಲ ಪೀಳಿಗೆಗೆ ಸೇರಿದವರು ಶ್ರೀ ಎಸ್. ಕೆ. ಅಂದಿನ ಅಬಾಲವೃದ್ಧರ ರಕ್ತಗತವಾಗಿದ್ದವು ರಚನಾತ್ಮಕತೆ ರಾಷ್ಟ್ರಾಭಿಮಾನಗಳು. ರಾಷ್ಟ್ರಸೇವೆಯಲ್ಲಿ ಸರಕಾರದ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವ ಪ್ರತಿನಿಧಿಯಾಗಿ ಕೆಲಸ ಪ್ರಾರಂಭಿಸುವ ಸದವಕಾಶವು ಅವರಿಗೆ ಲಭ್ಯವಾಗಿತ್ತು ಆಗಲೆ ಆ ಸ್ಥಾನದಿಂದ ಅವರು ಕೇಂದ್ರ ಮತ್ತು ರಾಜ್ಯಸರಕಾರಗಳ ಯೋಜನೆಗಳನ್ನು ಕಾರ್ಯಗತ ಮಾಡುವಲ್ಲಿ ದಕ್ಷಆಡತತೆಯಲ್ಲಿ ತಮ್ಮನ್ನುತಾವು ನಿಷ್ಠೆಯಿಂದ ತೊಡಗಿಸಿಕೊಂಡರು. ಅವರು ತಮ್ಮ ಸುದೀರ್ಘವಾದ ೩೨ ವರ್ಷಗಳ ಸೇವಾವಧಿಯಲ್ಲಿ ಅಸಿಸ್ಟಂಟ ಎಕ್ಸಿಕ್ಯುಟಿವ್ ಇಂಜನಿಯರರಾಗಿ ೧೯೬೦ ರಿಂದ ೧೯೮೦ ರವರೆಗೆ, ೧೯೮೦ ರಿಂದ ೧೯೮೫ ರವರೆಗೆ ಎಕ್ಸಿಕ್ಯುಟಿವ್ ಇಂಜನಿಯರರಾಗಿ, ನಂತರ ೧೯೮೫ ರಲ್ಲಿ ಅಧೀಕ್ಷಿತ ಅಭಿಯಂತರರಾಗಿ ವಿವಿಧ ಅಧಿಕಾರ ಸ್ಥಾನಗಳನ್ನಲಂಕರಿಸಿ ಸೇವೆ ಸಲ್ಲಿಸಿದ್ದು ಆದರ್ಶಪ್ರಾಯವಾದಂಥ ದಾಖಲೆಯಾಗಿದೆ. ಮುಂಬೈ ರಾಜ್ಯ ಮತ್ತು ಏಕೀಕೃತ ಕರ್ನಾಟಕ ರಾಜ್ಯಗಳೆರಡರಲ್ಲೂ ಸೇವೆ ಸಲ್ಲಿಸುವ ಸೌಭಾಗ್ಯ ಅವರದು. ಪರಮಪೂಜ್ಯ ನಾಗನೂರ ಶ್ರೀ ನಿ.ಪ್ರ.ಸ್ವ. ಶಿವಬಸವ ಸ್ವಾಮಿಗಳ ಪ್ರಸಾದ ನಿಲಯದ ಗರಡಿ ಮನೆಯಲ್ಲಿ ಸಿದ್ಧರಾದವರೆಲ್ಲರು ಪರಮಪೂಜ್ಯರ ಆದರ್ಶ ಬದುಕಿನಂತೆ ಮಾತನಾಡದೆ ಕಾರ್ಯ ಕೌಶಲ್ಯ ಮೆರೆಯುವಂತೆ ಸದ್ದು ಗದ್ದಲವಿಲ್ಲದೆ ರಾಷ್ಟ್ರಸೇವೆ, ಸಮಾಜಸೇವೆಗಳನ್ನು ಮಾಡಿದವರು. ಇದಕ್ಕೆ ಬೆಳಗಾಂವಿಯ ನಾಗರಿಕರು ಮೆಚ್ಚಿಕೊಂಡು ಮಹಾಸ್ವಾಮಿಗಳವರ ೯೫ನೆಯ ಜಯಂತ್ಯುತ್ಸವದ ಸಮಯದಲ್ಲಿ ಶ್ರೀ ಎಸ್. ಕೆ. ಅವರನ್ನು ಸನ್ಮಾನಿಸಿದ್ದು ಸಮಯೋಚಿತ, ಔಚಿತ್ಯಪೂರ್ಣ. ಇದು ಅವರಿಗೆ ಸವಿನೆನಪಾದಂತೆ ಅವರ ಸ್ನೇಹಿತರಾದ ಅನೇಕ ಕಾರ್ಯಕರ್ತರಿಗೂ ಹರ್ಷದ,

ಹೆಮ್ಮೆಯ ಉಲ್ಲೇಖಾರ್ಹ ಘಟನೆ. ಪರಮಪೂಜ್ಯ ನಾಗನೂರ ಶ್ರೀ ಶಿವ-ಬಸವಸ್ವಾಮಿಗಳಿಗೂ ಮತ್ತು ಶ್ರೀ ಪ್ರಭುಸ್ವಾಮಿಗಳಿಗೂ ಸಂತೋಷದ ವಿಷಯ.

ವ್ಯಕ್ತಿಯ ಬೆಳವಣಿಗೆಯು ರಾಷ್ಟ್ರದ ಬೆಳವಣಿಗೆಯಲ್ಲಿದೆ ಎಂಬುದು ಶ್ರೀ ಎಸ್. ಕೆ. ಅವರ ದೃಢ ನಂಬುಗೆ ಸಮಾಜ ಹಾಗೂ ರಾಷ್ಟ್ರದ ಬೆಳವಣಿಗೆಗೆ ಧರ್ಮವೊಂದೇ ಅಂದರೆ ಜಾತ್ಯಾತೀತ ಆಚಾರವಿಚಾರಗಳೇ ಪರಮ ಸಾಧನವೆಂದು ನೆರೆನಂಬಿದವರು ಶ್ರೀ ಎಸ್. ಕೆ. ಆ ಭಾವನೆಯನ್ನು ಅವರು ತಮ್ಮ ನಿತ್ಯದ ಜೀವನದಲ್ಲಿ ವ್ಯಕ್ತಗೊಳಿಸುವುದನ್ನು ಅವರ ಸಂಪರ್ಕದಲ್ಲಿ ಬಂದವರಿಗೆಲ್ಲ ಚಿರಪರಿಚಿತ. "ಇವನಾರವ ಇವನಾರವ ನೆನ್ನದಿರಯ್ಯ" ಎಂಬ ಮಹಾತ್ಮಾ ಬಸವಣ್ಣನವರ ಸಂಸ್ಕೃತಿಯ ಸತ್ವವನ್ನು ಇವರು ತಮ್ಮ ಜೀವನದಲ್ಲಳವಡಿಸಿಕೊಂಡುದುದರ ಪರಿಣಾಮವೆಂದು ಬೇರೆ ಹೇಳಬೇಕಿಲ್ಲ. ಸರಳ, ಸ್ಪಷ್ಟ, ಸ್ವಚ್ಛ, ಸಾದಾ ಬದುಕು ಅವರ ಸಹಜ ಗುಣ. ಅವರು ಸಮಯ ಪ್ರಜ್ಞೆಯ, ಕರ್ತವ್ಯನಿಷ್ಠೆಯ, ಸ್ನೇಹಮಯ ಅಧಿಕ್ಷಕ ಅಭಿಯಂತರಾಗಿರುವಂತೆ ಅವರು ನೆಮ್ಮದಿಯ ಚಿಕ್ಕ ಸಂಸಾರದ ಚೊಕ್ಕ ಗೃಹಸ್ಥ ಜೀವಿಗಳೂ ಆಗಿದ್ದಾರೆ. ಅವರ ಜೊತೆ ಓದುಗರಾದ, ಸ್ನೇಹಿತರಾದ ಪ್ರಸ್ತುತ ಲೇಖಕರು ಬೆಳಗಾಂವಿಯ ನಾಗರಿಕರು ಶ್ರೀ ಎಸ್. ಕೆ. ಅವರಿಗೆ ಮಾಡಿದ ಸನ್ಮಾನದ ಸವಿ ನೆನಪಿಗಾಗಿ "ವೀರಶೈವದರ್ಶನ ಮೀಮಾಂಸೆ ಸಂ. ೪" ಎಂಬ ಕೃತಿಯನ್ನು ಅತ್ಯಂತ ಗೌರವಾಭಿಮಾನಗಳಿಂದ ಅರ್ಪಿಸುತ್ತಾರೆ.

# ಲೇಖಕರ ಮಾತು

ಇಲ್ಲಿ ಸಂಕಲನಗೊಂಡ ಐದು ಪ್ರಬಂಧಗಳು ನಾನು ಚಿಂತನ ಮಾಡುತ್ತ ಬಂದ ವಿಷಯುಗಳಿಂದ ವಚನ ಸಾಹಿತ್ಯವು ದರ್ಶನ ಸಾಹಿತ್ಯವೆ ? ಸಾಹಿತ್ಯ ಮತ್ತು ಶಾಸ್ತ್ರಸಾಹಿತ್ಯ, ಪ್ರಮಾಣವಿಚಾರ, ಸಂಪಾದನೆ ಮತ್ತು ಪ್ರಸಂಗ ಹಾಗೂ 'ಅನುಭಾವ'ಗಳು ಪರರಿಗೆ ಕೇಳುವಂತೆ ಮಾಡಿದ ವಿಚಾರಗಳ ಅಭಿವ್ಯಕ್ತಿ ಡಾ. ಕೆ. ಕೃಷ್ಣಮೂರ್ತಿಯುವರು ತಿಳಿಸಿದಂತೆ "ಇಂದಿನ ಭಾರತೀಯು ತತ್ತ್ವಶಾಸ್ತ್ರವನ್ನು ಕುರಿತ ಆಧುನಿಕ ಸಂಶೋಧಕರ ಮಾರ್ಗವನ್ನು ಅಳವಡಿಸಿಕೊಂಡು ಈ ಐದು ಪ್ರಬಂಧಗಳಲ್ಲಿ ಒಂದು ಉತ್ತಮವಾದ ಹಾಗೂ ಮಹತ್ತಮವಾದ ತತ್ತ್ವಶಾಸ್ತ್ರೀಯ ಹಿನ್ನಲೆಯುನ್ನು ಅಥವ ಭೂಮಿಕೆಯುನ್ನು ಅಣಿಗೊಳಿ"ಸಲಾಗಿದೆ ಎಂಬುದು ಅದರ ಅವಶ್ಯಕತೆಯುನ್ನು ಪೂರೈಸಿದಂತಾಗಿದೆ.

'ವಚನ ಸಾಹಿತ್ಯ'ವು ಸಾಹಿತ್ಯ ಎಂದು ಬಗೆದವರು ಅದು ಶಾಸ್ತ್ರ ಸಾಹಿತ್ಯವೇ ವಿನಾಲಲಿತ ಸಾಹಿತ್ಯವಲ್ಲ ಎಂಬುದನ್ನೇ ಅರಿತುಕೊಳ್ಳಲು ಅಸಮರ್ಥರಾದಂತಿದೆ. ಇದು ಸಾಹಿತ್ಯವೆಂದು ಬಗೆದು ಅಧ್ಯಯನಕ್ಕಿಳಿದಾಗ ಅವರು ಪ್ರವೇಶಿಸಿದುದು ತಾತ್ತ್ವಿಕಕೃಷಿ ಮಾಡಲಿಲ್ಲ; ಆದರೆ ಅದೇ ಕಾರ್ಯವನ್ನೇ ಮಾಡಿದ್ದು. ಆಗ ಸಾಹಿತ್ಯ ವಿದ್ವಾಂಸರು ಸಲಕರಣೆಯ ಕೊರತೆಯಿಂದ ಅದರ 'ಸಾರಸಾರಾಯುವಾದ ಆಧ್ಯಾತ್ಮಬೋಧೆ'ಯ ವಿವರಣೆಯಲ್ಲಿ ತೊಡಗಿದಾಗ ಅದರ 'ಮೂಲಭೂತ ಪ್ರಕ್ರಿಯೆ-ಪರಿಕಲ್ಪನೆಗಳ ಪರಿಶೀಲನೆ'ಯ ಕೊರತೆಯು ಗೋಚರಿಸದಿರದು.†

ತತ್ತ್ವಶಾಸ್ತ್ರ [ಪ್ರಾಚ್ಯ ಮತ್ತು ಪಾಶ್ಚಾತ್ಯ]ಗಳ ಪರಿಚಯುವಿದ್ದವರು ಈ ಸಾಹಿತ್ಯವನ್ನು ನೋಡಿದಾಗ ಇದು 'ಅನುಭಾವ ಸಾಹಿತ್ಯ' ಎಂದು ತಿಳಿಸಿ

---

† ನೋಡಿ. 'ಸಿದ್ಧಗಂಗಾಶ್ರೀ

ಆದರ ಸ್ಥಾನವು ಬೇರೆ ಕ್ಷೇತ್ರದಲ್ಲಿ ದೊಡ್ಡದು ಎಂದು ಬಗೆಯುವವರು ಇಲ್ಲ ದಿಲ್ಲ. ಈ ಸಂದರ್ಭದಲ್ಲಿ ಆ ರೀತಿಯ ವಿಚಾರ ಮಾಡುವವರಲ್ಲಿ ಇರುವ ಒಂದು ವಿಚಾರವುದೇನೆಂದರೆ ವಚನ ಸಾಹಿತ್ಯದಲ್ಲಿ ವಸ್ತು, ವಸ್ತುವಿಕಾಸ ವಿಚಾರಗಳಿವೆ, ಆದರೆ ಉಳಿದ ದರ್ಶನಗಳಲ್ಲಿಯಂತೆ ಜ್ಞಾನಸಿದ್ಧಾಂತ(ಪ್ರಮಾಣ Epistemology) ಮತ್ತು ವಾದ (Debate ಕಥಾ) ಇಲ್ಲಿ ಇಲ್ಲ ಎನ್ನುವದು. ಇನ್ನೂ ತುಸು ಬಿಡಿಸಿ ಹೇಳುವುದಾದರೆ ವಸ್ತುಸಾಕ್ಷಾತ್ಕಾರ (ಅನುಭಾವ) ಬೌದ್ಧಿಕ ನಿರ್ಣಯವಲ್ಲ. ಮೂರನೆಯ ಮಾತೊಂದನ್ನು ಇಲ್ಲಿ ಸೇರಿಸಬೇಕಾ ಗುತ್ತದೆ. ಅದೇನಂದರೆ "ವಚನ ಸಾಹಿತ್ಯವು ಅನುಭಾವ ಸಾಹಿತ್ಯ". ಅಂದರೆ ಭಕ್ತಿಸಾಹಿತ್ಯ. ಈ ಒಂದು ಅಭಿಪ್ರಾಯವು ಸಮಗ್ರ ವಚನ ಸಾಹಿತ್ಯವು ಭಕ್ತಿ ಗೀತ ಸಾಹಿತ್ಯವೆಂದು ಅನ್ನಲಿಕ್ಕಾಗದು. ಈ ಸಾಹಿತ್ಯವು ತತ್ತ್ವ–ಸೃಷ್ಟಿ ಮೂಲವಸ್ತು, ಸೃಷ್ಟಿಕ್ರಮ, ಅಲ್ಲಿಯ ತತ್ತ್ವಹಸಿಗೆ, ನೀತಿ, ಜ್ಞಾನಸಿದ್ಧಾಂತ ವಿಚಾರ ಮುಂತಾದ ಹಲವು ವಿಚಾರಗಳನ್ನು ಕೂಡ ಪ್ರತಿಪಾದಿಸುವದನ್ನು ನೋಡುತ್ತೇವೆ. "ಅನುಭಾವ"ದ ಹಸಿಗೆಯಾಗದೆ ವಚನ ಸಾಹಿತ್ಯದಲ್ಲಿಯ "ಅನುಭಾವ" ಪದದ ಬಳಕೆಯಿಂದಾದ ಬಗೆಬಗೆಯ ಅರ್ಥ ಛಾಯೆಗಳು ಗೊತ್ತಾಗಲಾರವು. ಈ ಮಾತಿಗೆ ಪ್ರಸ್ತುತ ಪ್ರಬಂಧದಲ್ಲಿಯ ಹಸಿಗೆ ಅಥವಾ ವಿಶ್ಲೇಷಣೆ ಒಂದು ಉತ್ತಮ ನಿದರ್ಶನವೆಂದು ಹೇಳಬಹುದು.

ವಸ್ತುವಿಜ್ಞಾನವನ್ನು (Ontology) ವಿದ್ವಾಂಸರು ಗುರುತಿಸಿದಂತೆ ಜ್ಞಾನಸಿದ್ಧಾಂತ (Epistemology) ಹಾಗೂ ಕಥಾ (Debating or dis–course) ವಿಧಾನಗಳನ್ನು ಕೂಡ ವಚನಸಾಹಿತ್ಯದ ಅಧ್ಯಯನದಿಂದ ಗುರುತಿ ಸಲು ಸಾಧ್ಯವೆಂಬುದನ್ನು ಇಲ್ಲಿ ಪ್ರಕಟವಾದ ಪ್ರಬಂಧಗಳಲ್ಲಿ ನೋಡಬಹುದು. ವಚನಶಾಸ್ತ್ರದ ಅಧ್ಯಯನವು 'ನವ್ಯನ್ಯಾಯ'ದ ಬೇರುಗಳಲ್ಲಿ ಉಂಟು ಎಂಬುದನ್ನು ತೋರಿಸಿಕೊಟ್ಟುದನ್ನು ಸುಪ್ರಸಿದ್ಧ ನ್ಯಾಯಶಾಸ್ತ್ರ ಕೋವಿದ ಡಾ. ಗೋಪಿಕಾಮೋಹನ ಭಟ್ಟಾಚಾರ್ಯರೆಂಬವರು ಪರಿಶೀಲಿಸಿ ಶ್ರೀ ಕೆಂಬಿ ಯವರದು ಸಾಕ್ಷ್ಯಾಧಾರಪೂರ್ವಕ ವೈಜ್ಞಾನಿಕ ನಿರ್ಣಯವಾಗಿದೆಯೆಂದು ಅಭಿ ಪ್ರಾಯ ಪಟ್ಟಿದ್ದು ಗಮನಾರ್ಹ. ಇದು ಶ್ರೀ ಕೆಂಬಿಯವರ ಹೊಸ ಸಾಧನೆ. ಇದರಿಂದ ವಚನಸಾಹಿತ್ಯವು ಕೇವಲ ಸಾಹಿತ್ಯವೆಂಬಂತೆ ಅದು ಕೇವಲ ಭಕ್ತಿ

(ಅನುಭಾವ) ಸಾಹಿತ್ಯವೆಂದು ಹೇಳುವುದು ಸರಿಯಲ್ಲವೆಂದು ಸಿದ್ಧವಾಗುತ್ತದೆ. ವಚನಸಾಹಿತ್ಯದ ರಚನಾತ್ಮಕ ಪರಿವೀಕ್ಷಣೆಯನ್ನು ಈ ನಿಟ್ಟಿನಲ್ಲಿಹೆಚ್ಚು ಹೆಚ್ಚು ಆಳವಾಗಿ ಮಾಡಿದರೆ ಕನ್ನಡಿಗರು ಭಾರತೀಯ ಆನ್ವೀಕ್ಷಿಕೀ ವಿಜ್ಞಾನಕ್ಕೆ ಕನ್ನಡ ಭಾಷೆಯಲ್ಲಿ ನೀಡಿದ ಹೊಸ ಕೊಡುಗೆಯ ಕಲ್ಪನೆ ಆಗದಿರದು. ಭಾರತೀಯ ದಾರ್ಶನಿಕ ಮಹಾಪ್ರವಾಹಕ್ಕೆ ಇವರ ಪರಿಸ್ಪಂಧನವೆಂತು, ಅದು ಜೀವನದ ಅವಶ್ಯಕತೆಯಿಂದಾದುದೇ ವಿನಾ ಪಾಶ್ಚಿಮಾತ್ಯರಂತೆ ಕೇವಲ ಭೌದ್ಧಿಕಫಲವಲ್ಲವೆಂಬುದು ದೃಢವಾಗುತ್ತದೆ. ಈ ಕಲ್ಪನೆಯ ಹಿನ್ನೆಲೆಯುಳ್ಳ ಆಕ್ಸ್‌ಫರ್ಡ ವಿಶ್ವವಿದ್ಯಾಲಯದ ಸ್ಪಾಲ್ಡಿಂಗ ಪ್ರಾಚಾರ್ಯರಾದ ಬಿ.ಕೆ. ಮತಿಲಾಲ ಕೂಡ ಡಾ. ಕಂಬಿಯವರ ಕೃತಿಗಳು ವಿಚಾರ ಪ್ರಚೋದಕವಾಗಿವೆ (stimulate some thoughts) ಆಸಕ್ತಿ ಕುದುರಿಸುವಂಥವಾಗಿವೆ ಎಂದು ಬರೆದಿರುವುದು ಯಥೋಚಿತವೆಸ್ಟ.

ಇಲ್ಲಿ ಸಂಕಲನವಾದ ಪ್ರಬಂಧಗಳು ಸಾಧನೆ, ಕರ್ನಾಟಕ ಭಾರತಿ, ಬಸವಪಥ, ಪ್ರಸಾದ, ತರಳಬಾಳು ಮೊದಲಾದ ಪತ್ರಿಕೆಗಳಲ್ಲಿ ಆಗಲೆ ಪ್ರಕಟವಾದಂಥವು. ಅವುಗಳನ್ನು ಸಂಕಲಿಸಿ ವಿದ್ವಾಂಸರ ಅವಗಾಹನೆಗೆ ತರಬೇಕೆಂಬ ಆತುರತೆಯಿಂದ ಪ್ರಕಟಿಸಲಾಗಿದೆ. ಆಯಾಪತ್ರಿಕೆಗಳ ಸಂಪಾದಕರು ಅವುಗಳನು ಪ್ರಕಟಿಸಲು ಉದಾರಭಾವನೆ ತೋರಿದ್ದಕ್ಕಾಗಿ ಅವರಿಗೆ ಕೃತಜ್ಞತೆಗಳು.

ಈ ಸಂಕಲನಕ್ಕೆ ಮುನ್ನುಡಿಯನ್ನು ಬರೆದ ಡಾ. ಕೆ. ಕೃಷ್ಣಮೂರ್ತಿಯವರಿಗೆ, ಆಸ್ಥಾನವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ ನಿವೃತ್ತ ವೀರಶೈವ ಆಗಮಪ್ರಾಚಾರ್ಯ ಮಹಾರಾಜಾ ಸಂಸ್ಕೃತ ಕಾಲೇಜ ಅವರು ಬರೆದ ಪರಿಚಯ ಹಾಗೂ ಡಾ. ರಾಯನಾಡೆ ಅವರು ಜರ್ಮನ್, ಕಾಂಟನದರ್ಶನ ಜೈನದರ್ಶನಗಳಲ್ಲಿ ವಿಶೇಷ ಕೆಲಸಮಾಡಿ ವೀರಶೈವಸಾಹಿತ್ಯದ ಬಗ್ಗೆ ವಿದ್ಯಾರ್ಥಿದೆಸೆಯಲ್ಲಿದ್ದಾಗಿನಿಂದಲೂ ಆಸಕ್ತಿಯುಳ್ಳವರಾಗಿದ್ದ ಅವರು ನನ್ನ ಕೃತಿಗಳ ರಚನಾತ್ಮಕ ಪರಿವೀಕ್ಷಣೆ ಮಾಡಿದುದಕ್ಕಾಗಿ ಇವರೆಲ್ಲರಿಗೂ ಕೃತಜ್ಞತೆಗಳು. ಈ ಕೃತಿಯನ್ನು ಅಲ್ಪಕಾಲದಲ್ಲಿ ಸುಂದರವಾಗಿ ಮುದ್ರಿಸಿದ ರಾಜಶ್ರೀ ಪ್ರೆಸ್ಸಿನ ಮಾಲಕರಿಗೂ, ಕಾರ್ಯಕರ್ತರಿಗೂ ಲೇಖಕರು ಕೃತಜ್ಞರಾಗಿದ್ದಾರೆ.

# ಪರಿವಿಡಿ

# ವಚನ ಸಾಹಿತ್ಯವು ದರ್ಶನ ಸಾಹಿತ್ಯವೆ ?

ಭಾರತೀಯ ಪ್ರಾದೇಶಿಕ ಭಾಷೆಗಳು ಬಹಳ ಇರುತ್ತವೆ. ಅವುಗಳಲ್ಲಿ ಒಂದು ಕನ್ನಡಭಾಷೆ. ಸಂಸ್ಕೃತವು ಈ ದೇಶದ ಸಾಹಿತ್ಯಕ, ಸಾಂಸ್ಕೃತಿಕ, ಧಾರ್ಮಿಕ ದಾರ್ಶನಿಕಭಾಷೆ ಎಂದು ನಂಬಿಕೊಂಡು ಬರಲಾಗಿದೆ. ಮತ್ತು ಇದು ಪಾರಂಪರಿಕ ಪ್ರಯೋಗವಾಗಿದೆ. ಆದರೂ ಗೌತಮಬುದ್ಧ, ಮಹಾವೀರರು ತಮ್ಮ ಬೋಧೆಗಳನ್ನು, ಪ್ರಾದೇಶಿಕ-ಭಾಷೆಗಳಾದ ಪಾಲಿ ಮತ್ತು ಮಾಗಧಿಗಳಲ್ಲಿ ಬೋಧಿಸಿ ಅವುಗಳಿಗೆ ದಾರ್ಶನಿಕಭಾಷೆಯ ಸ್ಥಾನವನ್ನು ಗಳಿಸಿಕೊಟ್ಟರು. ಇವರ ನಂತರ ಇವರಷ್ಟೇ ಪ್ರಭಾವೀ ಅನುಭಾವಿಗಳಾದ ಬಸವಣ್ಣ, ಪ್ರಭುದೇವರು, ಮಹಾದೇವಿ, ಮತ್ತು ಮುಕ್ತಾಯಕ್ಕ, ಮುಂತಾದವರು ಹಾಗೂ ವ್ಯಾಪಕವಾಗಿ ಪ್ರಭಾವವನ್ನು ಬೀರಿದವರು ಬೋಧೆಯನ್ನು ಕನ್ನಡದಲ್ಲಿ ಬೋಧಿಸಿದರು. ಈ ಬೋಧೆಯು ವಚನರೂಪದಲ್ಲಿ ಇದೆ. ಇದು ಆಳ ಮತ್ತು ವಿಸ್ತಾರದಲ್ಲಿ ದೊಡ್ಡಗಾತ್ರದ್ದಾಗಿದೆ. ಕನ್ನಡದಲ್ಲಿ ಇಷ್ಟು ದೊಡ್ಡಗಾತ್ರದ ಸಾಹಿತ್ಯ ಇದನ್ನು ಬಿಟ್ಟರೆ ಇನ್ನೊಂದಿಲ್ಲ. ಬೋಧಾರೂಪದ ವಚನಸಾಹಿತ್ಯವು ದಾರ್ಶನಿಕ ಸಾಹಿತ್ಯವೇ ? ಎಂಬ ಪ್ರಶ್ನೆಯನ್ನು ಕನ್ನಡ ವಿದ್ವಾಂಸರು ಕೇಳಿದ್ದು ಯಥೋಚಿತವೆ. ಅದನ್ನಿಲ್ಲಿ ಪರಿಶೀಲಿಸುವಾ.

ವಚನಸಾಹಿತ್ಯವು ದರ್ಶನ ಸಾಹಿತ್ಯವೆಂದು ಗುರುತಿಸುವ ಪೂರ್ವದಲ್ಲಿ ಭಾರತೀಯ ಸಾಹಿತ್ಯವು ದರ್ಶನ ಸಾಹಿತ್ಯವಾಗಿ ಬೆಳೆದುಬಂದ ಬಗೆಯನ್ನರಿತು ಕೊಳ್ಳುವದವಶ್ಯವಿದೆ. ಆದುದರಿಂದ ಅದರ ಬೆಳವಣಿಗೆಯನ್ನು ತಿಳಿದು ಕೊಳ್ಳುವಾ. ಭಾರತೀಯರು ದರ್ಶನಪರ ಚಿಂತನವನ್ನು ಮಾಡಿದ್ದು ಬಹು ಪುರಾತನ ಕಾಲದಿಂದ. "The beginnings of Indian Philosophy

take us very far back indeed, for we can clearly trace them in the hymns of the Rgveda[೧] ಎಂಬುದು ವಿದ್ವಾಂಸರ ಅಭಿಪ್ರಾಯ. ಆದುದರಿಂದ ಜಗತ್ತಿನ ತತ್ತ್ವಜ್ಞಾನ ವಿದ್ವಾಂಸರೆಲ್ಲರು ಭಾರತದಲ್ಲಿ ವೇದಗಳು ತತ್ತ್ವಜ್ಞಾನದ ಅಥವ ದರ್ಶನದ ಆಕರಸಾಹಿತ್ಯವೆಂದು ಗುರುತಿಸಿ; ಭಾರತೀಯ ತತ್ತ್ವಜ್ಞಾನದ ಚರಿತ್ರೆಯನ್ನು ಅವುಗಳಿಂದಲೆ ಪ್ರಾರಂಭಿಸುತ್ತಾರೆ. ಹಾಗಾದರೆ ವೇದದಲ್ಲಿ ಇರುವುದಾದರು ಏನು ? ಎಂದು ಪ್ರಶ್ನಿಸಿದರೆ ಅಲ್ಲಿ ಪ್ರಾರ್ಥನೆಗಳಿವೆ. ಸ್ತೋತ್ರಗಳಿವೆ, ಯಜ್ಞಗಳನ್ನು ಕುರಿತ ಮಂತ್ರಗಳಿವೆ. ತತ್ತ್ವಪರ ಚಿಂತನದ ಮಂತ್ರಗಳಿವೆ. ಪ್ರಾರ್ಥನೆಗಳು, ಸ್ತೋತ್ರಗಳು, ಯಜ್ಞಪರಮಂತ್ರಗಳು ಸೇರಿ ಒಂದು ವರ್ಗಮಾಡಿ ಅದನ್ನು ಮತಧಾರ್ಮಿಕ ತತ್ತ್ವಪರಸಾಹಿತ್ಯವೆಂದು ಹೇಳಬಹುದು. ಇದೇ ಪ್ರಕಾರ ಕೇವಲ ತತ್ತ್ವಪರಚಿಂತನಾತ್ಮಕ ಮಂತ್ರಗಳನ್ನು ಅಂದರೆ ಸೃಷ್ಟಿಯ ಉಗಮ, ಮರಣಾನಂತರ ಮನುಷ್ಯ ಎಲ್ಲಿ ಸೇರಿಕೊಳ್ಳುವನು, ಸೃಷ್ಟಿಕರ್ತ, ಎಲ್ಲದರ ಮೂಲಭೂತತತ್ತ್ವ, ಮುಂತಾದವುಗಳು ತಾತ್ತ್ವಿಕ ವಿಚಾರಗಳು. ಇವುಗಳನ್ನು ಪ್ರತಿಪಾದಿಸುವ ಮಂತ್ರಗಳು ತಾತ್ತ್ವಿಕಚಿಂತನಪರ ಸಾಹಿತ್ಯವೆಂದು ಹೇಳಬಹುದು. ಈ ರೀತಿಯಲ್ಲಿ ವಿದ್ವಾಂಸರು ವೇದದ ವಿಷಯ ಕುರಿತು ಬರೆದಿದ್ದಾರೆ. ಆದುದರಿಂದ ವೇದವು ಭಾರತೀಯ ತತ್ತ್ವಜ್ಞಾನದ ಸಾಹಿತ್ಯವೆಂದು ಹೇಳಿದ್ದಾರೆ.

ವೇದ ಮಂತ್ರಗಳನ್ನು ಕವಿಗಳು ಬರೆದರೆಂದು. ಉಪನಿಷದಾದಿಗಳನ್ನು ಮನೀಷಿಗಳು ಬರೆದರೆಂದು ಹೇಳುವಾಗ ವೈದಿಕಸಾಹಿತ್ಯದಲ್ಲಿ ವಿಚಾರದ ಬೆಳವಣಿಗೆಯ ಹಂತಗಳನ್ನು ಗುರುತಿಸಿದ್ದಾರೆ,[೨] ಕವಿಗಳು ಆತ್ಮಚಕ್ಷುಗಳು, ಮನೀಷಿಗಳು ಮೇಧಾಚಕ್ಷುಗಳು ಎಂದು ಲಕ್ಷಣಿಸಿರುವುದುಂಟು. ಇವೆರಡು ದರ್ಶನದ ಅಂದರೆ ನೋಟದ ರೀತಿಗಳನ್ನು ತಿಳಿಸುತ್ತವೆ. ವೈದಿಕ ಸಾಹಿತ್ಯದಲ್ಲಿ ಅಂದರೆ ವೇದ ಬ್ರಾಹ್ಮಣ ಆರಣ್ಯಕ ಮತ್ತು ಉಪನಿಷತ್ತುಗಳಲ್ಲಿ ದರ್ಶನವು ಆತ್ಮಚಕ್ಷುಗಳಿಂದ ಪ್ರಾರಂಭ. ಅವರು ಆತ್ಮಚಕ್ಷುವಿನಿಂದ ಕಂಡುದನ್ನು

೧. Prof. M. Hiriyanna, Outlines of Indian Philosophy, P. 13, George Allen & Unwin 1958

೨. Shri Aurobindo, (Tr) Eight Upanisads, P. 7 fn. 2

ಮೇಧಾಚಕ್ಷುವಿನಿಂದ ಮನೀಷಿಗಳು ಕಂಡು ಇತರರಿಗೆ ತಿಳಿಯಪಡಿಸಿದರು. ಇದೇ ಮಾತನ್ನು ರಾಧಾಕೃಷ್ಣನರು ಸಮಾಧಿಸಾಹಿತ್ಯ ವಿಧಾನವೆಂದು ಕರೆದರು[೩] ಇದು ತಾತ್ತ್ವಿಕ ಸಾಹಿತ್ಯ ಸೃಷ್ಟಿಯಲ್ಲಿಯು ಅಥವ ತಾತ್ತ್ವಿಕ ಸಾಹಿತ್ಯದಲ್ಲಿಯ ಮಹತ್ವಪೂರ್ಣವಾದ ದಾರ್ಶನಿಕ ರೀತಿಗಳಿಂದಾಗಿ ದಾರ್ಶನಿಕಸಾಹಿತ್ಯವಾಗಿದೆ ಯೆಂದು ಗೊತ್ತು ಪಡಿಸುತ್ತದೆ.

ಅಂದರೆ ವೇದದಲ್ಲಿ ಪ್ರತಿಪಾದಿಸಿದ ವಿಷಯಗಳ ದೃಷ್ಟಿಯಿಂದ ನೋಡಿ ದಾಗ ವೇದವು ತಾತ್ತ್ವಿಕ ಸಾಹಿತ್ಯವೆಂದು ಗೊತ್ತಾಗುವಂತೆ, ವೇದದಲ್ಲಿಯ ವಿಷಯಗಳನ್ನು ಕವಿಗಳು ಕಾಣುವ ಪ್ರಕಾರಗಳನ್ನು ಗುರುತಿಸುವುವರಿಂದಲೂ ಇದು ದರ್ಶನ ಸಾಹಿತ್ಯವೆಂದು ತಿಳಿದುಬರುತ್ತದೆ. ಈ ಎರಡೂ ಅರ್ಥ ಗಳು ದರ್ಶನ ಶಬ್ದವೊಂದರಲ್ಲಿ ಇವೆ; ಅಥವ ದರ್ಶನ ಎಂಬ ಶಬ್ದವು ಈ ಎರಡೂ ಬಗೆಯ ಪ್ರತ್ಯಕ್ಷಗಳನ್ನು ಬೋಧಿಸುತ್ತದೆ. ಆದ್ದರಿಂದ ವೇದವು ಹಾಗೂ ಬ್ರಾಹ್ಮಣ, ಆರಣ್ಯಕಗಳು ಮತ್ತು ಉಪನಿಷತ್ತುಗಳು ಮೇಲೆ ವಿವರಿಸಿದ ಅರ್ಥದಲ್ಲಿ ದಾರ್ಶನಿಕ ಸಾಹಿತ್ಯ. ವೇದವು ಮಂತ್ರಪೂರಿತ. ಅದು ಕಾವ್ಯರೂಪದಲ್ಲಿದೆ. ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳಲ್ಲಿ ಗದ್ಯ ಮತ್ತು ಪದ್ಯಗಳು ಕಂಡುಬರುತ್ತವೆಯೆಂಬುದು ಇಲ್ಲಿ ಕೈಕೊಂಡ ಕಾರ್ಯದ ದೃಷ್ಟಿಯಿಂದ ಗಮನೀಯವಾದ ಅಂಶಗಳು.

ಇಲ್ಲಿ ಇನ್ನೊಂದು ಗಮನಿಸಬೇಕಾದ ಮಹತ್ವದ ಅಂಶವಿದೆ. ಇದು ಭಾರತೀಯ ತಾತ್ತ್ವಿಕ ಚಿಂತನ (metaphysical speculation)ದ ವಿಶಿಷ್ಟ ರೀತಿ. ಭಾರತೀಯರ ಈ ರೀತಿಯು ಪಾಶ್ಚಿಮಾತ್ಯರ ರೀತಿಯಿಂದ ತೀರ ಭಿನ್ನವಾದುದು. ಭಾರತೀಯ ತಾತ್ತ್ವಿಕಚಿಂತನದ ಅಧ್ಯಯನ ಮಾಡಿದ ಪ್ರತಿಯೊಬ್ಬ ಪಾಶ್ಚಿಮಾತ್ಯ ವಿದ್ವಾಂಸನೂ ಈ ಅಭಿಪ್ರಾಯ ಪಟ್ಟಿದ್ದಾನೆ. "It is a fact that this speculation has originated with

---

೩. Dr. S. Radhakrishnan, Brahma Sutra, P. 20
George Allen & Unwin (1960).

religion in the closed connection with it and has unfolded itself out of its connection with the Absolute.[೪]" ಎಂದು ಜರ್ಮನ ವಿದ್ವಾಂಸ. ಎರಿಚ್ ಫ್ರಾವನರ ಎಂಬವನು ಬರೆಯುತ್ತಾನೆ. ಬಹುದಿನಗಳ ಹಿಂದೆ ಸುಪ್ರಸಿದ್ಧ ಜರ್ಮನ ವಿದ್ವಾಂಸನಾದ ಮ್ಯಾಕ್ಸ ಮುಲ್ಲರನು "...religion and philosophy do not stand sundered in India" ಎಂದು ಗುರುತಿಸಿದ್ದಾನೆ. ಈ ಮಾತುಗಳು ಕೇವಲ ವೈದಿಕ ಸಾಹಿತ್ಯಾಧ್ಯಯನದಿಂದ ಗೊತ್ತಾಗುತ್ತವೆಯೆಂದೇನಲ್ಲ; ಬುದ್ಧ, ಮಹಾವೀರರ ಬೋಧಾ ಸಾಹಿತ್ಯದ ಅಧ್ಯಯನದಿಂದಲೂ ಖಚಿತಗೊಳ್ಳುತ್ತವೆ.

ಅಪಾರವಾದ ವೈದಿಕ ಸಾಹಿತ್ಯದಲ್ಲಿಯ ವಿಷಯಗಳ ವಿವರಣೆಯ ಪ್ರಕಾರ ಅದನ್ನು ಮೀಮಾಂಸಾ ಸಾಹಿತ್ಯವೆಂದು ಕರೆದು, ಪೂರ್ವ ಮತ್ತು ಉತ್ತರ ಮೀಮಾಂಸೆಗಳೆಂದು ಹೆಸರಿಸಿದ್ದು ಅದರ ಚರಿತ್ರೆಯಿಂದ ಅಥವ ತಾತ್ತ್ವಿಕ ಕ್ರಿಯೆಯ ಬೆಳವಣಿಗೆಯ ವೈವಿಧ್ಯತೆಯಿಂದ ಕಂಡುಬರುತ್ತದೆ. ಭಾರತೀಯ ತಾತ್ತ್ವಿಕಚಿಂತನವು ಈಗ ಭಿನ್ನಭಿನ್ನವಾದ ಎರಡು ಮಹಾಪ್ರವಾಹಗಳಾಯಿತು. ಈ ಮಹಾಕಾರ್ಯದ ಉಗಮವನ್ನು ಜೈಮಿನಿ ಮತ್ತು ಬಾದರಾಯಣರ ಕಾರ್ಯದಲ್ಲಿ ನೋಡಬಹುದು. ಈ ಇಬ್ಬರು ರಚಿಸಿದ ಸೂತ್ರಗಳನ್ನು ಜೈಮಿನಿಸೂತ್ರ ಅಥವ ಧರ್ಮಸೂತ್ರವೆಂದು, ಮತ್ತು ಬ್ರಹ್ಮಸೂತ್ರ ಅಥವ ಶಾರೀರಿಕಸೂತ್ರವೆಂದು ಅನುಕ್ರಮವಾಗಿ ಹೆಸರಿಸಲಾಗಿದೆ. ಸೂತ್ರಕಾರರಿಂದ ದಾರ್ಶನಿಕ ಯುಗದ ಆರಂಭವೆಂದೆನ್ನುವರು. ಯಾಕಂದರೆ ಪ್ರತ್ಯಕ್ಷ, ಅನುಮಾನ, ಶಬ್ದ ಮುಂತಾದ ಪ್ರಮಾಣಗಳ ಪ್ರಯೋಜನ, ಅವುಗಳ ಪ್ರಯೋಜನದ ವ್ಯಾಪ್ತಿ ಮುಂತಾದವುಗಳ ಪರಿಶೀಲನೆ ಇಲ್ಲಿ ಮಾಡಲಾಗಿದೆ. ಆಸ್ತಿಕ ಸೂತ್ರಗಳಂತೆ ನಾಸ್ತಿಕ ಸೂತ್ರಗಳೂ ಈ ಕಾರ್ಯ ಮಾಡಿರುವುದು ಸ್ಪಷ್ಟವಿದೆ. ದಾರ್ಶನಿಕ ಶಬ್ದಕ್ಕೆ ಈಗ ಹೊಸ ಅರ್ಥ ಬಂದಿತು, ಈಗ ಸೂತ್ರಕಾರರು ಪರ ಮತ್ತು ವಿರೋಧ

---

೪. Erich Frauwallner, History of Indian Philosophy Vol. I, P. XIII, Motilal Banarasidass (1973).

ದರ್ಶನಗಳ ಮಂಡನ ಮತ್ತು ಖಂಡನಗಳನ್ನು ಪ್ರತಿಪಾದಿಸಿ ಜಿಜ್ಞಾಸು ಬುದ್ಧಿಯನ್ನು ವ್ಯವಸ್ಥಿತ ರೀತಿಯಲ್ಲಿ ಮೆರೆದರು. ಸೂತ್ರಕಾರರ ನಂತರ ಭಾಷ್ಯಕಾರರು, ಕಾರಿಕಾಕಾರರು, ವೃತ್ತಿಕಾರರು, ಪ್ರಕರಣ ಮತ್ತು ವಾರ್ತಿಕಾ ಕಾರರು ಮುಂತಾದವರಲ್ಲಿ ಚರ್ಚೆಗಳ, ಅವುಗಳ ವಿಧಾನಗಳ ಮತ್ತು ಪ್ರಮಾಣ ಗಳ ಹೊಸ ಹೊಸ ರೂಪಗಳನ್ನು ನೋಡಬಹುದು. ಇದರಿಂದ ಪ್ರಮಾಣ ಶಾಸ್ತ್ರದ ಮುಖ್ಯಪಾರಿಭಾಷಿಕ ಪದಗಳ ವಿಶ್ಲೇಷಣ ವಿವರಣೆ ನಡೆದು ಸ್ಪಷ್ಟತೆ ಮತ್ತು ಖಚಿತತೆ ಹೆಚ್ಚಿತು. ಇದು ದಾರ್ಶನಿಕ ಕಾರ್ಯ. ಈ ಕಾರ್ಯವು ಆಧುನಿಕ ಜಗತ್ತಿನ ಯಾವದೇ ದೇಶದ ದರ್ಶನಶಾಸ್ತ್ರದ ಬೆಳವಣಿಗೆಗೂ ಸರಿ ದೊರೆಯಾಗಿ ನಿಲ್ಲುವ ಮಟ್ಟನ್ನು ಮುಟ್ಟಿತು. ಈ ಯುಗವು ನಾಗಾರ್ಜುನ ಮತ್ತು ದಿಙ್ನಾಗರಿಂದ ಪ್ರಾರಂಭವಾಯಿತು, ಮತ್ತು ಮಹತ್ವದ ಬೆಳವಣಿಗೆಯ ಹಂತವನ್ನು ಮುಟ್ಟಿತು.

ಮೇಲಿನ ವಿವರಣೆ ಆಸ್ತಿಕ ಸಾಹಿತ್ಯದ ಬೆಳವಣಿಗೆ ಮೀಸಲು ಎಂದು ಮಾತ್ರ ತಿಳಿಯಬೇಕಿಲ್ಲ. ನಾಸ್ತಿಕ ಸಾಹಿತ್ಯದಲ್ಲಿ ಕೂಡ ವಸ್ತುವಿಜ್ಞಾನ ಹಾಗೂ ಜ್ಞಾನವಿಜ್ಞಾನಗಳು ಒಟ್ಟಿಗೆಬೆಳೆದು ನಂತರ ಅವುಗಳು ಒಂದರಿಂದೊಂದು ಬೇರ್ಪಟ್ಟುದು ಕಂಡುಬರುತ್ತದೆ. ವೈದಿಕ ಸಾಹಿತ್ಯದ ಬೆಳವಣಿಗೆಯಲ್ಲಿ ಕಂಡು ಬರುವ ದಾರ್ಶನಿಕ ಚಟುವಟಿಕೆಗಳೆಲ್ಲ ನಾಸ್ತಿಕ ಸಾಹಿತ್ಯದಲ್ಲಿಯೂ ಕಂಡುಬರು ತ್ತವೆ.

ಆಸ್ತಿಕ ಮತ್ತು ನಾಸ್ತಿಕ ಸಾಹಿತ್ಯದ ಉಗಮವು ಜೀವನದ ಅವಶ್ಯಕತೆ ಗನುಗುಣವಾಗಿ ಆಮುದುಂಟು ಎಂಬುದನ್ನು ತತ್ತ್ವಶಾಸ್ತ್ರದ ವಿದ್ವಾಂಸರ ಒಟ್ಟಾರೆ ಅಭಿಪ್ರಾಯವೂ ಗಮನೀಯ. ಈ ಹಿನ್ನೆಲೆಯಲ್ಲಿ ವಚನಸಾಹಿತ್ಯದ ಪರಿಶೀಲನೆ ಅಗತ್ಯವೆಂದು ಬೇರೆ ಹೇಳಬೇಕಿಲ್ಲ.

ವಚನಸಾಹಿತ್ಯವು 'ದರ್ಶನ' ಶಬ್ದದಕ್ಕೆ ಸಂವಾದಿಯಾದ ಒಂದು ಪದವನ್ನು ಬಳಸಿರುವುದನ್ನು ನೋಡುತ್ತೇವೆ. ಅದು 'ಅನುಭವ' ಎಂಬ ಪದವು.

ಡಾ. ಎಸ್. ರಾಧಾಕೃಷ್ಣನ್ನರು ದಾರ್ಶನಿಕ ಶಬ್ದವನ್ನು ವರ್ಣಿಸಿದ್ದು ಹೀಗಿದೆ :

The term 'drasana' comes from the word 'drs', to see. This seeing may be either perceptual observation or conceptual knowledge or intuitional experience. It may be inspection of facts, logical inquiry or insight of soul... It is the one word that stands for all the complex inspira tion of philosophy by its beautiful vagueness." ಅವರು ಇನ್ನೂ ಹೇಳುವದೇನೆಂದರೆ : A 'darsana' is a spiritual perce ption, a whole view revealed to the soul sense. This soul sight, which is possible only when and where philosophy is lived, is the distinguishing mark of a true philosophy.[೫] ಈ ಮಾತುಗಳಲ್ಲಿ ಕಂಡುಬರುವ ವಿಚಾರವೇಂದರೆ : 'ದರ್ಶನ' ಎಂಬ ಪದವು ಇಂದ್ರಿಯ ಪ್ರತ್ಯಕ್ಷ, ಮನಃಪ್ರತ್ಯಕ್ಷ ಮತ್ತು ಆತ್ಮಪ್ರತ್ಯಕ್ಷ ಎಂಬ ಮೂರೂ ಬಗೆಯ ಪ್ರತ್ಯಕ್ಷವೆಂಬ ಅರ್ಥವನ್ನು ಕೊಡುವದು. ವಿಷಯಗಳ ಅಥವ ಸಂಗತಿಗಳ ನಿರೀಕ್ಷಣೆ, ತಾರ್ಕಿಕ ವಿಮರ್ಶೆ ಅಥವ ಆತ್ಮದೃಷ್ಟಿ ಎಂಬ ಅರ್ಥವೂ ಈ ಪದಕ್ಕುಂಟು ಎಂಬುದು ಮತ್ತೊಂದು ವಿವರಣೆ...ಹೀಗೆ ಇದು ಒಂದೇ ಒಂದು ಶಬ್ದವು ತತ್ತ್ವಜ್ಞಾನದ ನಾನಾ ಅರ್ಥ ಕೊಡುವಂಥದು ಆಗಿದೆ. ಈ ಗುಣಕ್ಕೆ ಆ ಶಬ್ದದ ಸುಂದರವಾದ ಅಸ್ಪಷ್ಟತೆಯೆ ಕಾರಣ. ಡಾ. ಚಂದ್ರೋದಯ ಶರ್ಮ ಎಂಬ ಘನವಿದ್ವಾಂಸರು ಇನ್ನೂ ಸ್ಪಷ್ಟ ಮತ್ತು ಖಚಿತ ರೀತಿಯಲ್ಲಿ ಹೇಳುವುದು ಗಮನಾರ್ಹ. ಅವರು ಹೀಗೆ ಹೇಳುತ್ತಾರೆ : "The word 'darsana means 'vision' and also the instrument of vision'. It stands for the direct; immediate and intuitive vision of Reality, the actual perception."[೬] ಇವರ ಪ್ರಕಾರ 'ದರ್ಶನ'ವೆಂದರೆ 'ವಸ್ತುಪ್ರತ್ಯಕ್ಷ'

೫. Dr. S. Radhakrishnan, Innian Philosophy, Vol. I. PP 43-44

೬. Dr. Chandrodaya Sharma, A Critical Survey of Indian Philosophy, P. 11

ಮತ್ತು ಅದರ 'ಪ್ರಮಾಣ'. ಈ ಶಬ್ದಕ್ಕಿರುವ ಅರ್ಥಗಳು ವೇದಕಾಲದ ಕವಿಯ ಕಾರ್ಯದಿಂದ ಹಿಡಿದು ಗಂಗೇಶೋಪಾಧ್ಯಾಯನವರೆಗೆ ನಡೆದ ದಾರ್ಶನಿಕ ಕಾರ್ಯದ ಅರ್ಥಗಳೆಲ್ಲ ಚಂದ್ರೋದಯ ಶರ್ಮರು ಹೇಳುವ ಮಾತುಗಳಲ್ಲಿವೆ. ಇದರ ಹಿನ್ನೆಲಿಯಲ್ಲಿ 'ಅನುಭವ' ಶಬ್ದಕ್ಕಿರುವ ಅರ್ಥವನ್ನು ನೋಡಿದರೆ ವಚನಸಾಹಿತ್ಯದಲ್ಲಿ ನಡೆದ ದಾರ್ಶನಿಕ ಕ್ರಿಯೆಗಳ ಅರ್ಥವಾಗುತ್ತದೆ. 'ಅನುಭವ' ಎಂದರೆ ಆತ್ಮದೃಷ್ಟಿ ಮತ್ತು ಪ್ರತ್ಯಕ್ಷ ಹಾಗೂ ವಸ್ತು. ಈ ಶಬ್ದದಲ್ಲಿ ಪ್ರಮಾಣ, ಪ್ರಮಾ ಮತ್ತು ವಸ್ತು ಇಲ್ಲವೆ ವಿಷಯ ಎಂಬ ಮೂರೂ ಅರ್ಥಗಳಿವೆ. "ಏನೆಂಬೆ ಏನೆಂಬ ಒಂದು ಎರಡಾದುದ ?" "ಅಂದಿಂಗೆಳೆಯ ನೀನು, ಹಳೆಯ ನಾನು" ಎಂಬ ದೂತುಗಳು ಆತ್ಮಚಕ್ಷು ದರ್ಶನವನ್ನು ತಿಳಿಸುತ್ತವೆ. "ಸಂಸಾರವೆಂಬುದು ಗಾಳಿಯ ಸೊಡರು. ಸಿರಿಯೆಂಬುದು ಸಂತೆಯ ಮಂದಿ. ಇದನಚ್ಚಿ ಕೆಡಬೇಡ." ಎಂಬ ಮಾತುಗಳು ವಿಷಯ ನಿರೀಕ್ಷಣೆಯ ಪರವಾಗಿರುವ ಅನುಭವವೆಂಬುದನ್ನು ತಿಳಿಸುತ್ತವೆ. 'ಅನುಭವವನು ಮಾಡು' ಎಂಬ ಪದಪ್ರಯೋಗವು ಪಾರಮಾರ್ಥಿಕ ವಿಷಯ ಚರ್ಚೆಯನ್ನು ಮಾಡು ಎಂಬ ಅರ್ಥ ಕೊಡುತ್ತದೆ. ಹೀಗೆ 'ಅನುಭವ' ಶಬ್ದವು ದರ್ಶನ ಶಬ್ದದ ಎಲ್ಲ ಅರ್ಥಗಳನ್ನು ಕೊಡುವದು. ವೇದ ಕವಿಗಳು ಕಂಡಂತೆ ಕಾಣುವ ಕಾರ್ಯ, ಮನೀಷಿಗಳ ಮೇಧಾಕಾರ್ಯ, ಮತ್ತು ತಾರ್ಕಿಕರ ತಾರ್ಕಿಕ ಚರ್ಚೆಯ ಕಾರ್ಯಗಳೆಲ್ಲವನ್ನು ವಚನ ಸಾಹಿತ್ಯದಲ್ಲಿ ನೋಡುತ್ತೇವೆ.

ಶಿವಶರಣರು ಅಂದರೆ ವಚನಕಾರರು ಅನುಭಾವಿಗಳಾಗಿ ಪರಬ್ರಹ್ಮವನ್ನು ನೋಡಿದ ಆಪ್ತರು, ಶಿಷ್ಟರು, ಪರಬ್ರಹ್ಮ ಜಗತ್ತು ಹಾಗೂ ತಮಗೆ ಇರುವ ಸಂಬಂಧವನ್ನು ವಿವರಿಸಿದ ಜಿಜ್ಞಾಸುಗಳು. ತಮ್ಮ ತಮ್ಮಲ್ಲಿ ತಾವು ಕಂಡ ಸತ್ಯವನ್ನು ಕುರಿತು, ವಿಚಾರವನ್ನು ಕುರಿತು ಚರ್ಚಿಸಿದ ತಾರ್ಕಿಕರು ಅಥವ ವಾದವಿದ್ಯಾ ಪರಿಣತರು. ಬಸವಣ್ಣನವರು ಮತ್ತು ಪ್ರಭುದೇವರು ಶಿವಶರಣರೊಡನೆ ಅನುಭಾವಮಾಡುವಲ್ಲಿ ನಿರತರಾಗಿದ್ದಂತೆ ಪುರಾವಾದಿಗಳ ಕೂಡ ಚರ್ಚೆಯಲ್ಲಿ ತೊಡಗಿದುದನ್ನು ವಚನ ಸಾಹಿತ್ಯವು ಸ್ಪಷ್ಟಪಡಿಸುತ್ತದೆ. ಇದೆಲ್ಲ ಗದ್ಯ ಹಾಗೂ ಪದ್ಯಗಳ ಉತ್ಕೃಷ್ಟ ಸಮನ್ವಯರೂಪವಾದ ವಚನ

ಗಳಲ್ಲಿ ನಡೆದಿದೆ. ಇದೊಂದು ಹೊಸ ಉಪಕ್ರಮ. ಭಾರತೀಯ ವಿದ್ವಾಂಸರು ಅಥವ ದಾರ್ಶನಿಕರು ಬಹುತೇಕ ಪದ್ಯದಲ್ಲಿಯೇ ಈ ಕಾರ್ಯಮಾಡಿದುದನ್ನು ರಿತರೆ ಶಿವಶರಣರು ಬಳಸಿದ 'ವಚನ' ರೂಪವು ಹೊಸಪ್ರಯೋಗವಾಗಿದೆ. ಶಿವಶರಣರು ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಪ್ರಮಾಣ ಗಳನ್ನು ಬಳಸಿದ್ದನ್ನು ವಚನಸಾಹಿತ್ಯದ ಅಧ್ಯಯನದಿಂದ ಕಂಡುಕೊಳ್ಳ ಬಹುದು. ಆದ್ದರಿಂದ ಕನ್ನಡಸಾಹಿತ್ಯವಾದ ವಚನಸಾಹಿತ್ಯವು ಪಾಲಿ ಅರ್ಧ ಮಾಗಧಿ ಮತ್ತು ಸಂಸ್ಕೃತದಾರ್ಶನಿಕ ಸಾಹಿತ್ಯದಂತೆ ದಾರ್ಶನಿಕ ಸಾಹಿತ್ಯ ವಾಗಿದೆ.

●

# ವೀರಶೈವಸಾಹಿತ್ಯ ಮತ್ತು ಶಾಸ್ತ್ರಸಾಹಿತ್ಯ

## ೧. ಸಾಹಿತ್ಯ ಮತ್ತು ಶಾಸ್ತ್ರಸಾಹಿತ್ಯ :

ಲಾಕ್ಷಣಿಕರು ಸಾಹಿತ್ಯ ಮತ್ತು ಶಾಸ್ತ್ರಸಾಹಿತ್ಯವನ್ನು ಪ್ರತ್ಯೇಕವಾಗಿಯೇ ಲಕ್ಷಣಿಸಿದ್ದಾರೆ. ಸಾಹಿತ್ಯವು ಕಾಂತಾಸಮ್ಮಿತವೆಂದು ಲಕ್ಷಣಿಸಿದರೆ ಶಾಸ್ತ್ರ ಸಾಹಿತ್ಯವು ಗುರು ಸಮ್ಮಿತವೆಂದು ಲಕ್ಷಣಿಸುತ್ತಾರೆ. ಆದುದರಿಂದ ಒಂದು ಇನ್ನೊಂದರಿಂದ ಬೇರೆ ಎಂಬುದು ಸ್ಪಷ್ಟವಾಗುತ್ತದೆ. ಸಾಹಿತ್ಯದ ಒಂದಿ ಲ್ಲೊಂದಂಗವನ್ನು ಅಕ್ಷರಸ್ಥರು ಓದುಬಲ್ಲರು, ಸಂತೋಷಪಡಬಲ್ಲರು. ಗುರು ಸಮ್ಮಿತವಾದ ಶಾಸ್ತ್ರಸಾಹಿತ್ಯದಲ್ಲಿ ಕೂಡ ನಾನಾ ಪ್ರಕಾರ ಗಳಿವೆ; ಸೂತ್ರಗಳು, ಕಾರಿಕಾ ಅಥವಾ ವೃತ್ತಿ ಇಲ್ಲವೆ ಕಾಶಿಕಾ, ಭಾಷ್ಯ, ವ್ಯಾಖ್ಯಾನ, ವಾರ್ತಿಕ ಮತ್ತು ಪ್ರಕರಣ ಎಂದು. ಸಾಹಿತ್ಯಾಂಗಗಳನ್ನು ಲಕ್ಷಣಿಸಿರುವಂತೆ ಶಾಸ್ತ್ರಾಂಗ ಗಳನ್ನೂ ಲಕ್ಷಣಿಸಿದ್ದಾರೆ. ಶಾಸ್ತ್ರ ಸಾಹಿತ್ಯಾಂಗಗಳನ್ನು ಅಕ್ಷರಸ್ಥರಾದಮಾತ್ರಕ್ಕೆ ಓದುವದು ಸುಲಭವಲ್ಲ. ಇವುಗಳ ಅಧ್ಯಯನಕ್ಕೆ ವಿಶೇಷವಾದ ತರಬೇತಿ ಅವಶ್ಯವಿರುತ್ತದೆ. ಇದಕ್ಕೆ ಸಾಕ್ಷಿಯಾಗಿ ಒಂದು ಉದಾಹರಣೆಯನ್ನು ಇಲ್ಲಿ ಕೊಡಬಹುದು.[1]

ನಾ ನೀನೆಂಬ ಭೇದ ಅಂದೂ ಇಲ್ಲ, ಇಂದೂ ಇಲ್ಲ:
ಸಾಲೋಕ್ಯನಲ್ಲ, ಸಾಮೀಪ್ಯನಲ್ಲ ಶರಣ;
ಸಾರೂಪ್ಯನಲ್ಲ ಶರಣ, ಸಾಯುಜ್ಯನಲ್ಲ ಶರಣ;
ಸಕಾಯನಲ್ಲ, ಅಕಾಯನಲ್ಲ ಗುಹೇಶ್ವರಲಿಂಗ ತಾನೆಯಾಗಿ"

ಇದು ಕನ್ನಡಭಾಷೆಯಲ್ಲಿರುವ ವಚನ. ಕನ್ನಡ ಸಾಹಿತ್ಯಾಂಗಗಳ ಪರಿಜ್ಞಾನವಿದೆ ಯೆಂದ ಮಾತ್ರಕ್ಕೆ ಈ ವಚನ ವಿವರಣೆ ಸಾಧ್ಯವೆಂದು ಹೇಳಬೇಕಿಲ್ಲ. ಇದರ

೧. ಸಂ. ಎಲ್. ಬಸವರಾಜು : ಅಲ್ಲಮನ ವಚನಚಂದ್ರಿಕೆ, ಪು. ೧೫೦, ವ. ೬೮೯.

ವಿಶ್ಲೇಷಣೆ, ಸಂಶ್ಲೇಷಣೆಗಳಿಗೆ ಬೇಕಾದ ಸಲಕರಣೆಗಳೇ ಬೇರೆ. ಮೊದಲನೆಯ ಸಾಲಿನ ವಿವರಣೆಗೆ ಹಾಗೂ ತೌಲನಿಕ ಪ್ರತಿಪಾದನೆಗೆ ಆಸ್ತಿಕ ದರ್ಶನಗಳ, ನಾಸ್ತಿಕ ದರ್ಶನಗಳ ವಸ್ತು ಸಿದ್ಧಾಂತ, ಸೃಷ್ಟಿಸಿದ್ಧಾಂತಗಳ ಚಿಂತನ, ಮಂಥನ ಬೇಕು. ಎರಡನೆಯ ಸಾಲಿನ ವಿವರಣೆಗೆ ಆಸ್ತಿಕ ದರ್ಶನಗಳು ಪ್ರತಿಪಾದಿಸುವ ಮುಕ್ತಿಯ ಸಿದ್ಧಾಂತಗಳ ಪ್ರಭೇದಗಳು ಹಾಗೂ ಅವುಗಳ ದೃಷ್ಟಿಕೋನದಲ್ಲಿರುವ ಅಂತರಕ್ಕೆ ಕಾರಣವಾದ ವಸ್ತುಸಿದ್ಧಾಂತದ ಪರಿಜ್ಞಾನವೂ ಇರಬೇಕು. ಅದೇರೀತಿ ನಾಸ್ತಿಕ ದರ್ಶನಗಳು ಇವುಗಳ ಬಗ್ಗೆ ತಳೆದ ನಿಲುವಿನ ಮತ್ತು ಅವು ಪ್ರತಿಪಾದಿಸುವ ಸಿದ್ಧಾಂತಗಳ ಜ್ಞಾನವಿರಬೇಕು. ಕೊನೆಯ ಸಾಲಿನ ವಿವರಣೆಗೆ ಭಾರತೀಯ ದರ್ಶನವಲ್ಲಿ ಬರುವ ಕ್ರಿಯುಸಿದ್ಧಾಂತದ ಜ್ಞಾನಬೇಕು. ಇಂಥವೇ ವಿಚಾರಗಳನ್ನು ಪಾಶ್ಚಿಮಾತ್ಯ ದಾರ್ಶನಿಕರು ಮಾಡಿದ್ದಾರೆಯೆ ? ಹಾಗಿದ್ದರೆ ಹಾಗಿದ್ದರೆ ಅವರ ಪ್ರಣಾಲಿ ಗಳಿಗೂ ಭಾರತೀಯರ ಪ್ರಣಾಲಿಗಳಿಗೂ ಇರುವ ಸಾಮ್ಯವೈಷಮ್ಯಗಳೇನು ?ಎಂಬ ಪರಿಜ್ಞಾನಬೇಕು. ಅಂದರೇನೇ ಈ ವಚನದ ವಿಚಾರವೈಶಾಲ್ಯ ಹಾಗೂ ಅಲ್ಲಿಯ ತೌಲನಿಕ ದಾರ್ಶನಿಕ ಕೋನದ ಪರಿಚಯ ಮಾಡಿಕೊಡುವುದು ಸಾಧ್ಯ. ಇಲ್ಲವಾದರೆ ಈ ವಚನವು ಭದ್ರವಾಗಿ ಮುದ್ರೆಗೊಂಡ ಭಂಡಾರವು. ಆದ ಕಾರಣ, ಸಾಹಿತ್ಯ ಪರಿಣತನಿಗಿರುವ ಸಲಕರಣೆಗಳು, ಶಾಸ್ತ್ರಸಾಹಿತ್ಯಪರಿಣತಗಿರುವ ಸಲಕರಣೆಗಳು ಬೇರೆ ಬೇರೆ.

ಸಾಹಿತ್ಯಪರಿಣತರು ಮತಶಾಸ್ತ್ರ ಸಾಹಿತ್ಯವನ್ನು ವಿವರಿಸಲು ಹೋದಾಗ ಅವರಿಗೆ ಆಯಾ ಮತಶಾಸ್ತ್ರ ಸಿದ್ಧಾಂತಗಳ ಸೂಕ್ಷ್ಮಪ್ರಭೇದಗಳ ಪರಿಜ್ಞಾನವಿಲ್ಲದೆ ಇರುವುದು ಸ್ವಾಭಾವಿಕವಾಗಿರುವುದರಿಂದ ದೋಷಪೂರ್ಣವಾದ ವಿವರಣೆ ಕೊಡುವ ಸಂಭವ ಹೆಚ್ಚು. ವೀರಶೈವ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿಯ ಒಂದು ಅಂಗವಹುದು. ಆ ಸಾಹಿತ್ಯದಲ್ಲಿ ಬರುವ ಲಿಂಗ ಮತ್ತು ಅಂಗವೆಂಬ ಪದಗಳನ್ನು ಸಾಂಖ್ಯಶಾಸ್ತ್ರದಲ್ಲಿಯ ಪುರುಷ ಮತ್ತು ಪ್ರಕೃತಿಗಳು ಎಂದು ಸುಲಭವಾಗಿ, ಸಂಕೋಚವಿಲ್ಲದೆ ಹೇಳುವರು (ಹೇಳಿದವರೂ ಇದ್ದಾರೆ) ಇದು ದೋಷಪೂರ್ಣ ವಿವರಣೆ. ಇದು ಸಾಹಿತ್ಯ ಪರಿಣತಿ ಶಾಸ್ತ್ರ ಸಾಹಿತ್ಯ ಪರಿಣತಿಗಳು ಭಿನ್ನ ಭಿನ್ನವೆಂಬುದನ್ನು ತೋರಿಸುತ್ತದೆ.

೨. ವೀರಶೈವಸಾಹಿತ್ಯ ಲಕ್ಷಣ, ವೀರಶೈವ ಶಾಸ್ತ್ರಸಾಹಿತ್ಯ ಲಕ್ಷಣ :

ಹರಿಹರಾದಿ ಮಹಾಕವಿಗಳು ಕನ್ನಡ ಸಾಹಿತ್ಯದಲ್ಲಿ ಕ್ರಾಂತಿ ಕವಿಗಳೆಂದು ಸುಪ್ರಸಿದ್ಧ. ಅವರು ವೀರಶೈವ ಸಾಹಿತ್ಯದ ವಿಶಿಷ್ಟ ಲಕ್ಷಣವನ್ನು. ಕಾವ್ಯ ಪ್ರತಿಭೆಯ ಸಾರ್ಥಕತೆಯನ್ನು ಅನುಕ್ರಮವಾಗಿ ಹೀಗೆ ಲಕ್ಷಣಿಸುತ್ತಾರೆ :

ಮನುಜರಮೇಲೆ ಸಾವವರಮೇಲೆ ಕನಿಷ್ಟರಮೇಲೆ ಪದ್ಯಮಂ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರರೆಂದು ತಾ
ನನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನಂ[೨]

ಈ ಪದ್ಯವು ಕಾವ್ಯ ವಸ್ತುವು ಯಾವುದಾಗಿರಬಾರದು ಎಂದು ತಿಳಿಸುವದಲ್ಲದೆ ಆದರ ವಸ್ತುವು ಯಾವುದಾಗಿರಬೇಕು ಎಂಬುದನ್ನೂ ಪ್ರತಿಪಾದಿಸುತ್ತದೆ. ವೀರಶೈವ ಸಾಹಿತಿಯಾದವನು ಪರಿಪಾಲಿಸಬೇಕಾದ ಬೇಡ ಹಾಗೂ ಬೇಕುಗಳು ಇಲ್ಲಿ ಶಾಸನದಂತೆ ಇವೆ. ಇವನ ನಂತರದ ವೀರಶೈವ ಕವಿಗಳು ಈ ಶಾಸನ ಕಾರನ ಆಜ್ಞೆಯಂತೆ ವರ್ತಿಸಿದ್ದಾರೆ. ಇವೇ ವಿಚಾರ ಪರಿಪೋಷಕವಾಗಿ. ಕವಿಯು ತನಗಿರುವ ಪ್ರತಿಭೆಯ ಸಾರ್ಥಕತೆ ಎಲ್ಲಿದೆ ಎಂಬುದನ್ನು ಅರಿತು ಕೊಂಡವನಾಗಿರಬೇಕು ಎಂಬುದನ್ನು ಮುಂದಿನ ಪದ್ಯವು ಚಿತ್ರಿಸುತ್ತದೆ.

ರಸೆಯೊಳ್ ರಸವತ್ಕವಿತೆಯ
ನುಸುರಲ್ಪಡೆದಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸವನಾಂತವೊಲಕ್ಕುಂ[೩]

ವೀರಶೈವ ಸಾಹಿತ್ಯ ವಿದ್ಯಾರ್ಥಿಗಳು ಈ ಎರಡು ಪದ್ಯಗಳಿಂದ ವೀರಶೈವ ಸಾಹಿತ್ಯವು ಜೈನ ಮತ್ತು ವೈಷ್ಣವ ಸಾಹಿತ್ಯಗಳಿಂದ ಯಾಕೆ ಭಿನ್ನವಾಗಿದೆ

---

೨. ಎಸ್. ಎಸ್. ಬಾಳವಾಡ : ಕರ್ನಾಟಕ ಸಾಹಿತ್ಯ ಸಂಸ್ಕೃತಿ ದರ್ಶನ, ಪುಟ ೭೩
೩. ಆರ್. ಸಿ. ಹಿರೇಮಠ, ಎಂ. ಎಸ್. ಸುಂಕಾಪುರ ; ಸಂ. ರಾಜಶೇಖರ ವಿಳಾಸ, ಪು. ೪

ಯೆಂಬುದನ್ನು ತಿಳಿದುಕೊಳ್ಳಬಹುದು. ಈ ಮೂರೂ ಪ್ರಕಾರದ ಕನ್ನಡ ಸಾಹಿತ್ಯವನ್ನು ಸಾಹಿತ್ಯ ವಿದ್ಯಾರ್ಥಿಗಳು ಛಂದಸ್ಸು, ಅಲಂಕಾರ, ಪಾತ್ರಸೃಷ್ಟಿ, ಶೈಲಿ ಮುಂತಾದ ದೃಷ್ಟಿಯಿಂದ ಅಧ್ಯಯನ, ಬೋಧನ ಹಾಗೂ ಸಂಶೋಧನ ಮಾಡಬಹುದು.

ವೀರಶೈವ ಶಾಸ್ತ್ರ ಸಾಹಿತ್ಯವೆಂದಾಗ ಅದರ ಲಕ್ಷಣ. ಅದರ ಅಧ್ಯಯನ ಮೇಲಿನ ರೀತಿಯಿಂದ ಭಿನ್ನ, ಶಿವಶರಣರು ಶಾಸ್ತ್ರಸಾಹಿತ್ಯದ ಬಗ್ಗೆ ಒಂದೊಂದು ಮಾತುಗಳನ್ನು ತಮ್ಮ ವಚನಗಳಲ್ಲಿ ಹೇಳಿದ್ದಾರೆ. ಅವರ ಮಾತುಗಳಿಂದ ಅವರಿಗಿರುವ ಅಗಾಧವಾದ ಶಾಸ್ತ್ರಜ್ಞಾನದ ಪರಿಚಯುವು ನಮಗಾಗುತ್ತದೆ. ಬಸವಣ್ಣನವರು, ಪ್ರಭುದೇವರು, ಜೇಡರ ದಾಸಿಮಯ್ಯಗಳು ಮುಂತಾದವರ ಮಾತುಗಳನ್ನು ಇಲ್ಲಿ ಉದ್ಧರಿಸಬಹುದು.

೧. ಮಾತೆಂಬುದು ಜ್ಯೋತಿರ್ಲಿಂಗ.
೨. ಶಬ್ದ ಸೋಪಾನವ ಕಟ್ಟಿ ನಡೆಸಿದರು ಪುರಾತನರು ದೇವಲೋಕಕ್ಕೆ ಬಟ್ಟೆ ಕಾಣಿರೋ.
೩. ನುಡಿವರೆ ಲಿಂಗಮೆಚ್ಚಿ ಅಹುದಹುದೆನಬೇಕು.
೪. ಒಡಲೆಂಬ ಬಂಡಿಗೆ ಶರಣರ ನುಡಿಗಡಣವೆ ಕಡೆಗೀಲು.

ಮೊದಲನೆಯ ಮಾತು ಪ್ರಭುದೇವರದು. ಇದು ಆಧ್ಯಾತ್ಮ ತತ್ವಪ್ರತಿಪಾದನೆ ಮಾಡುತ್ತದೆ. ಇದು ಪ್ರಭುದೇವರು ಪ್ರತಿಪಾದಿಸುವ ದಾರ್ಶನಿಕ ದೃಷ್ಟಿಕೋನಗಳಲ್ಲಿ ಒಂದಾಗಿರುವದೆಂಬುದನ್ನು ತಿಳಿಸುವದು. ವಚನಕಾರರಲ್ಲಿ ಬಸವಣ್ಣನವರು ಮೊದಲಾದವರು ಇದನ್ನು ಪ್ರತಿಪಾದಿಸಿದ್ದಾರೆಂಬುದನ್ನು ಇಲ್ಲಿ ಸ್ಮರಿಸಿಕೊಂಡಾಗ ಬಹುತೇಕ ವಚನಕಾರರ ದಾರ್ಶನಿಕ ದೃಷ್ಟಿಕೋನವಿದಾಗಿದೆಯೆಂಬುದು ಖಚಿತವಾಗುತ್ತದೆ. ಎರಡನಯುದು ಚನ್ನಬಸವಣ್ಣನವರ ಮಾತು. ಇವರು ಶಬ್ದವೆಂಬುದು ಸೋಪಾನ ಅಂದರೆ ಮುಕ್ತಿಯ ಉಪಾಯುವೆಂದು ತಿಳಿಸಿದ್ದಾರೆ. ಮೊದಲಿನ ಮಾತಿಗೆ ಅನುಗುಣವಾಗಿಯೇ ಈ ವಿಚಾರವಿದೆ. ಆಧ್ಯಾತ್ಮ ತತ್ವ ಮತ್ತು ಅದರ ಸಿದ್ಧಿಯಉಪಾಯುಗಳು ಒಂದನ್ನೊಂದು ಅರ್ಥ ಮಾಡಿಕೊಳ್ಳಲು ಸಹಾಯಕವಾಗಿವೆ ಶಾಸ್ತ್ರಾರ್ಥದಲ್ಲಿ ಎಂಬುದನು ಚೆನ್ನಬಸವಣ್ಣ

ನವರ ಮಾತು ತಿಳಿಸುತ್ತದೆ. ಮೂರನೆಯ ಮಾತು ಬಸವಣ್ಣನವರದು. ಈ ಮಾತಿನ ಪ್ರಕಾರ, ಶಬ್ದವು ಅಂತರ್ವಾಣಿ ಇಲ್ಲವೆ ಆತ್ಮವೆಂಬ ಲಿಂಗಸಮ್ಮತವಾಗಿರಬೇಕು ಎಂಬುದು. ಶಬ್ದವು ಜ್ಯೋತಿರ್ಲಿಂಗವೆಂದು ಪ್ರಭುಸಮ್ಮಿತವಿಲ್ಲಿ ಇನ್ನೊಂದು ರೂಪ ತಾಳಿ ಬಂದಿದೆ. ಲಿಂಗ ಮೆಚ್ಚಬೇಕು ಮಾತನ್ನು ಅಂದರೆ, ಮಾತು ಜ್ಯೋತಿರ್ಲಿಂಗವಾಗದೆ ಅದೆಂತು ಮೆಚ್ಚುವುದು ? ಇದನ್ನು ನಾವು ಸ್ವತಃ ಪ್ರಾಮಾಣ್ಯವೆಂದು ಪ್ರಮಾಣ ಪರಿಭಾಷೆಯಲ್ಲಿ ಹೇಳಬಹುದು. ವಚನ ಕಾರರ ಈ ಏಕೇಶ್ವರವಾದವು ಅದ್ವೈತಾತ್ಮಕವಾಗಿರುವುದರಿಂದ ಇದರ ಪ್ರಮಾಣ ವಿಚಾರವು ಸ್ವತಃ ಪ್ರಾಮಾಣ್ಯವನ್ನೇ ಒಪ್ಪುತ್ತದೆ ಎಂಬ ಮೇಲಿನ ವಿವರಣೆಯನ್ನು, ಎತ್ತಿ ಹಿಡಿಯುತ್ತದೆ. ನಾಲ್ಕನೆಯ ಮಾತು ಜೇಡರ ದಾಸಿ ಮಾರ್ಯರದು. ಜೀವನವು ಸರಿಯಾದ ದಾರಿಯಲ್ಲಿ ಕ್ರಮಿಸುವಾಗ ಸುಸಕ್ಷಿತ ವಾಗಿ ಕ್ರಮಿಸಬೇಕೆಂದರೆ ಶರಣರ ಮಾತೆಂಬ ಕಡೆಗೀಲಿನ ಅವಶ್ಯಕತೆಯಿದೆ ಎಂಬುದನ್ನು ಎತ್ತಿ ತೋರಿಸುವದು. ಇದು ಶಾಸನ ಹಾಗೂ ತ್ರಾಣಗಳು ಎರಡೂ ಆಗಿರುವದನ್ನು ತಿಳಿಸುತ್ತದೆ. ಹೀಗೆ ವಚನಕಾರರು ಶಾಸ್ತ್ರ, ಆ ವಸ್ತುವಿನ ಸಿದ್ಧಿಯ ಉಪಾಯ ಹಾಗೂ ಅದು ಸ್ವತಃ ಪ್ರಾಮಾಣ್ಯವಾಗಿದ್ದು ಶಾಸನಾತ್ಮಕವೆಂಬ ವಿವಿಧ ವಿವರಣೆಗಳನ್ನು ಕೊಟ್ಟು ತಿಳಿಸಿದ್ದಾರೆ. ಅದರ ವಿವಿಧ ಮುಖಗಳ ಅಧ್ಯಯನ, ಬೋಧನ ಮತ್ತು ಸಂಶೋಧನ ಮಾಡುವ ದರ ಕ್ಷೇತ್ರಗಳ ಎಲ್ಲೆಗಳನ್ನು ಗುರುತಿಸಿ ಮಾರ್ಗದರ್ಶನ ಮಾಡಿದ್ದಾರೆ.

## ೩ ವೀರಶೈವ ಶಾಸ್ತ್ರಸಾಹಿತ್ಯದ ಪ್ರಕಾರಗಳು :

ಶ್ರೀ ವಿಶುದ್ಧ ಪ್ರಕರಣಂಗಳನೆಸಗಿ ವೇದ
ಶೈವ ತಂತ್ರಾವಳಿಗೆ ಭಾಷ್ಯಮಂ ದೀಪಿಕೆಯ
ನಾವೃತ್ತಿಯಂ ವ್ಯಾಖ್ಯೆಯುಮಂ ಬರೆದ ಬೋಧಾಯನಾಯನೂರು
ಶಂಕರಾರ್ಯ್ಯಂ

ವೋಂವೊ ಹರದತ್ತರ್ ತ್ರಿಲೋಚನಾಘೋರಶಿವ
ದೇವಗುಣನಿಲಯ ಸರ್ವಾತ್ಮ ಶಂಭುಗಳಾನ
ತಾವನರ್ ಭೂತಿಕಂಠಾದಿ ಪೂರ್ವಾಚಾರ್ಯ್ಯರೀವುದೆಮಗಮಲ
ಮತಿಯುಮಂ[೪]

೪. ಆರ್. ಸಿ. ಹಿರೇಮಠ; ಸಂ. ಪದ್ಮರಾಜ ಪುರಾಣ, ಪು. ೪, ಪ. ೧೧

ಎಂಬ ಪದ್ಯವನ್ನು ಬರೆದ ಪದ್ಮಣಾಂಕ ಕವಿಯು ವೀರಶೈವ ಶಾಸ್ತ್ರಸಾಹಿತ್ಯ ಪ್ರಭೇದ ಗಳನ್ನು ಉಲ್ಲೇಖಿಸಿದ್ದಾನೆ. ಆ ಪ್ರಭೇದಗಳಲ್ಲಿ ಕೃಷಿ ಮಾಡಿದವರ ಹೆಸರುಗಳನ್ನೂ ಉಲ್ಲೇಖಿಸಿದ್ದಾನೆ. ಶ್ರೀಪತಿಪಂಡಿತನು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆಯುವಾಗ ಅಗಸ್ತ್ಯ ಮುನಿಯು ಬ್ರಹ್ಮಸೂತ್ರಗಳಿಗೆ ವೃತ್ತಿ ಯನ್ನು ಬರೆದಿದ್ದುದನ್ನು ತಿಳಿಸು ತ್ತಾನೆ[೫] ಋಷಭ ಪಂಡಿತರು ತೈತ್ತಿರೀಯ ಭಾಷ್ಯದ ಆರಂಭದಲ್ಲಿ "ದೂರ್ವಾಸಃ ವೃತ್ತಿಕಾರಕಃ" ಎಂದು ತಿಳಿಸಿದ್ದಾರೆ.[೬] ಡಾ. ಎಸ್. ಶ್ರೀಕಂಠಶಾಸ್ತ್ರಿ ಅವರು ಭಾರತೀಯ ಸಂಸ್ಕೃತಿ ಎಂಬ ಗ್ರಂಥದಲ್ಲಿ ಶೈವ ವಿಶೇಷಾದ್ವೈತ ಎಂಬ ತಲೆಬರಹದಲ್ಲಿ ಬರೆಯುವಾಗ ವೀರಶೈವ ಮತಾ ಚಾರ್ಯರ ವಿಷಯ ತಿಳಿಸಿ ವೀರಶೈವಪರ ಭಾಷ್ಯ ಹಾಗೂ ವೃತ್ತಿಗಳ ಉಲ್ಲೇಖ ಮಾಡುತ್ತ, "ಅಗಸ್ತ್ಯ ಮತ್ತು ದುರ್ವಾಸರು ಬ್ರಹ್ಮಸೂತ್ರಗಳಿಗೆ ವೃತ್ತಿಗಳನ್ನು ಬರೆದರು. ಶ್ರೀಪತಿಪಂಡಿತನು ಶ್ರೀಕರಭಾಷ್ಯದಲ್ಲಿ ವೀರಶೈವ ಮತದ ತತ್ವಗಳನ್ನು ಸಂಕ್ಷೇಪವಾಗಿ ಹೀಗೆ ಸೂಚಿಸಿರುವನು"[೭] ಎಂದು ತಿಳಿಸುತ್ತಾರೆ. ಕರ್ನಾಟಕ ಕವಿಚರಿತಕಾರರ ಗುಬ್ಬಿಯ ಮಲ್ಲಣ್ಣರು ತಂತ್ರಕ್ಕೆ ವ್ಯಾಖ್ಯಾನವನ್ನೂ ಮರಿ ತೋಂಟದಾರ್ಯರು ಸಿದ್ಧಾಂತ ಶಿಖಾಮಣಿಗೆ ವ್ಯಾಖ್ಯಾನವನ್ನೂ ಬರೆದಿರುವರೆಂದೂ ಅಲ್ಲದೆ ಸಾಸಲ ಚಿಕ್ಕಣಾರಾಧ್ಯರು ಬರೆದ ಪಂಚಬ್ರಹ್ಮೋದಯವೆಂಬುದು ಶ್ರೀಪತಿ ಪಂಡಿತರು ಬರೆದ ವೇದ ಮಂತ್ರ ಭಾಷ್ಯಕ್ಕೆ ಕನ್ನಡ ಭಾಷ್ಯವೆಂದೂ, ಭಟ್ಟ ಭಾಸ್ಕರನ ಯಜು ರ್ವೇದ ಭಾಷ್ಯಕ್ಕೆ ಕನ್ನಡ ಟೀಕೆಯನ್ನು ಗುರುನಂಜದೇವನು ಬರೆದನೆಂದೂ, ದಶಗ್ರಂಥಿಗೆ ವೀರಣಾರಾಧ್ಯರು ಕನ್ನಡ ವ್ಯಾಖ್ಯಾನ ರೂಪದಲ್ಲಿ ಶಿವಜ್ಞಾನ ಪ್ರದೀಪಿಕೆ ಎಂಬ ಗ್ರಂಥವನ್ನೂ ಚೆನ್ನವೀರನೆಂಬ ಪಂಡಿತನು ವೀರಮಾಹೇ ಶ್ವರ ಟೀಕೆ ಪುರುಷಸೂಕ್ತ ಟೀಕೆ ಎಂಬ ಗ್ರಂಥಗಳನ್ನು ರಚಿಸಿದರೆಂದೂ ತಿಳಿ ಸುತ್ತಾರೆ ಡಾ. ಹೆಂಡಿ ಯವರು ದೀಕ್ಷಾಬೋಧೆಯ ಮುನ್ನುಡಿಯಲ್ಲಿ ಮಲ್ಲ ಣಾರ್ಯನು 'ಶಿವಜ್ಞಾನ ಪ್ರದೀಪಿಕೆ'ಯನ್ನೂ, ಲಕ್ಷ್ಮೀದೇವನು ವೇದ ಶಾಸ್ತ್ರ

---

೫. ಎ. ಜಿ. ಸಿದ್ಧಪ್ಪಾರಾಧ್ಯ ಸಂ. : ಶ್ರೀಕರ ಭಾಷ್ಯಂ, ಸಂ. ೧. ಪು. ೫ ಶ್ಲೋಕ ೧೬

೬. ಕಾಶೀನಾಥ ಶಾಸ್ತ್ರೀ : ವೀರಶೈವ ಮಹಾತ್ಮರು, ಪು. ೩೯

೭. ಎಸ್. ಶ್ರೀಕಂಠಶಾಸ್ತ್ರಿ : ಭಾರತೀಯ ಸಂಸ್ಕೃತಿ, ಪು. ೧೫೬

ಪುರಾಣಗಳ ಸಾರವನ್ನು ಉದ್ಧರಿಸಿ 'ಸಾರೋದ್ಧಾರ' ಎಂಬ ಗ್ರಂಥವನ್ನು ಜ್ಯೋತಿರ್ನಾಥನು 'ಶೈವ ರತ್ನಾಕರ'ವನ್ನೂ, ಜಗದಾರಾಧ್ಯ ನಾಗೇಶನು 'ಶಿವಜ್ಞಾನ ಸಮುಚ್ಚಯ'ವನ್ನೂ[೮] ರಚಿಸಿದ್ದನ್ನು ತಿಳಿಸಿ ಇವೆಲ್ಲ ಸಂಸ್ಕೃತದಲ್ಲಿ ರಚಿತವಾದ ವೀರಶೈವ ಶಾಸ್ತ್ರ ಗ್ರಂಥಗಳು'[೮] ಎಂದು ಬರೆಯುತ್ತಾರೆ. ನಂದಿಕೇಶ್ವರ ಶಿವಾಚಾರ್ಯರ ಲಿಂಗಧಾರಣ ಚಂದ್ರಿಕೆ, ಕೆರೆಯ ಪದ್ಮರಸರ ದೀಕ್ಷಾಬೋಧೆಗಳು ಪ್ರಕರಣ ರೂಪದ ಸಾಹಿತ್ಯಕ್ಕೆ ಸೇರಿದ ಕೃತಿಗಳಾಗಿವೆ. ಮರಿತೋಂಟದಾರ್ಯರ ವೀರಶೈವಾನಂದ ಚಂದಿಕೆಯು ವಾರ್ತಿಕ ಪ್ರಕಾರದ ಸಾಹಿತ್ಯಕ್ಕೆ ಸೇರಿದ ಕೃತಿಯಾಗಿದೆ. ಮೊಗ್ಗೆಯ ಮಾಯಿದೇವರು ಸೂತ್ರಗಳನ್ನು, ಪ್ರಕಾಶಿಕೆಯನ್ನು ರಚಿಸಿದ್ದಾರೆ. ಇದರಿಂದ ವೀರಶೈವ ಶಾಸ್ತ್ರ ಸಾಹಿತಜ್ಞ ಭಾರತೀಯ ದಾರ್ಶನಿಕರು ತಿಳಿಸಿದ ಶಾಸ್ತ್ರ ಸಾಹಿತ್ಯ ಪ್ರಭೇದಗಳಲ್ಲಿ ಸಾಕಷ್ಟು ಕೃಷಿ ಮಾಡಿರುವುದು ಕಂಡುಬರುತ್ತದೆ. ಮೇಲೆ ಉಲ್ಲೇಖಿಸಿದ ಸೂತ್ರ, ಕಾರಿಕಾ ಇಲ್ಲವೆ ಕಾಶಿಕಾ ಅಥವಾ ವೃತ್ತಿ, ಭಾಷ್ಯ, ವ್ಯಾಖ್ಯಾನ, ವಾರ್ತಿಕ ಮತ್ತು ಪ್ರಕರಣ ಎಂಬ ಪ್ರಭೇದಗಳ ಲಕ್ಷಣಗಳನ್ನು ಶಾಸ್ತ್ರ ಕೋವಿದರು ತಿಳಿಸಿದ್ದಾರೆ.

## ೪. ಶಾಸ್ತ್ರಸಾಹಿತ್ಯ ಹಾಗೂ ಅದರ ಪ್ರಕಾರಗಳ ಲಕ್ಷಣಗಳು :

ಶಾಸ್ತ್ರಸಾಹಿತ್ಯವನ್ನು ಲಾಕ್ಷಣಿಕರು ಲಕ್ಷಣಿಸಿದ್ದಾರೆ :

೧) ಶಾಸನಾತ್ತ್ರಾಣಗುಣಾಚ್ಚ ಶಾಸ್ತ್ರಮ್

ಶಾಸನ ಮಾಡುವದು ಹಾಗೂ ತ್ರಾಣವನ್ನು ಕೊಡುವುದು ಶಾಸ್ತ್ರವು. ಈ ವ್ಯಾಖ್ಯೆಯು ಧರ್ಮಪರವಾಗಿರುವದು.

೨) ಪ್ರವೃತ್ತಿರ್ವಾ ನಿವೃತ್ತಿರ್ವಾ ನಿತ್ಯೇನ ಕೃತಕೇನವಾ।
ಪುಂಸಾಂ ಯೇನೋಪದಿಶ್ಯೇತ ತಚ್ಛಾಸ್ತ್ರಮಿತಿ ಕಥ್ಯತೇ

೮. ಬಿ. ಬಿ. ಹೆಂಡಿ ; (ಸಂ) ದೀಕ್ಷಾಬೋಧೆ, ಪುಟ ೧೪
೯. ಶ್ರೀಕಂಠಶಾಸ್ತ್ರಿ, ಭಾರತೀಯ ಸಂಸ್ಕೃತಿ ಅಡಿಟಿಪ್ಪಣಿ, ಪು. ೬೬-೬೮
ಮೈಸೂರು ವಿಶ್ವವಿದ್ಯಾಲಯ.

ಪ್ರವೃತ್ತಿ ನಿವೃತ್ತಿ ಮಾರ್ಗಗಳನ್ನು, ನಿತ್ಯಾನಿತ್ಯ ವಿವೇಕವನ್ನು ಬೋಧಿಸುವುದೇ ಶಾಸ್ತ್ರವು ಎಂದು ಹೇಳಲಾಗುತ್ತದೆ. ಈ ವ್ಯಾಖ್ಯೆಯು ಪಾರಮಾರ್ಥಿಕ ವಿಷಯ ವಿವೇಕ ಪರವಾಗಿರುತ್ತದೆ. ಒಟ್ಟಿನಲ್ಲಿ ಶಾಸ್ತ್ರವು ಆಚಾರ, ಅರಿವು, ಪರ ವಸ್ತು ಮತ್ತು ಸಿದ್ಧಿಗಳ ವಿವರಣೆಯನ್ನು ಕೊಡುವ ಸಾಹಿತ್ಯವಾಗಿದೆ. ಭಾರತೀಯ ಪ್ರತಿಯೊಂದು ಮತಧರ್ಮದವರೂ ಈ ಕಾರ್ಯವನ್ನು ಮಾಡು ತ್ತಲೇ ಬಂದಿರುತ್ತಾರೆ. ಇಂಥ ಕಾರ್ಯವನ್ನು ವೀರಶೈವಮತಧರ್ಮದ ಪರ ವಾಗಿಯೂ ಮಾಡಿರುವುದು ಸ್ವಾಭಾವಿಕ. ಆತ್ಮಶಕ್ತಿ ಮತ್ತು ದೃಷ್ಟಿ ಸಂವರ್ಧ ನಾಪರವಾದ ಶಾಸ್ತ್ರಸಾಹಿತ್ಯವು ಜೀವನದ ಅವಶ್ಯಕತೆಗಳಿಗನು ಗುಣವಾಗಿ ಬೆಳೆಯುತ್ತಲೇ ನಡೆದಿದೆ. ದೈಹಿಕ ಹಸಿವಿಗೆ ನಾನಾ ಮುಖಗಳಿರುವಂತೆ ವೈಚಾರಿಕ ಹಸಿವೆಗೂ ನಾನಾ ಮುಖಗಳಿರುತ್ತವೆ ಎಂಬುದಕ್ಕೆ ಶಾಸ್ತ್ರಸಾಹಿತ್ಯ ಪ್ರಕಾರಗಳೇ ಸಾಕ್ಷಿ.

ಭಾರತದಲ್ಲಿ ಈ ಸಾಹಿತ್ಯವು ಮೊದಮೊದಲು ಆತ್ಮಸಾಕ್ಷಾತ್ಕಾರಿಗಳ ಮಾತಿನ ರೂಪದಲ್ಲಿದ್ದು ಅದು ಮಂತ್ರ ಇಲ್ಲವೆ ವಚನ ಎಂಬ ಹೆಸರಿನಿಂದ ಸುಪ್ರಸಿದ್ಧವಾಗಿರುತ್ತದೆ. ನಂತರ ಆ ಮಂತ್ರ ಮತ್ತು ಮಾತುಗಳಲ್ಲಿಯ ವಿಚಾರಸಾಮ್ಯ ಹಾಗೂ ಆ ಸಾಮ್ಯ ವಿಚಾರಧಾರೆಯ ಬೆಳವಣಿಗೆಗಳ ದೃಷ್ಟಿ ಯಿಂದ ಪ್ರಾಜ್ಞರು ಆ ಸಾಹಿತ್ಯಕ್ಕೆ ಒಂದು ಸುವ್ಯವಸ್ಥಿತ ರೂಪವನ್ನು ಕೊಟ್ಟರು. ಆಗ ಅದನ್ನು ಜೀವನದ ಹಂತಗಳಿಗೆ ಅನುಗುಣವಾಗಿ ಬಳಸಿ ಕೊಂಡರು. ಇದು ಆಶ್ರಮಸಾಹಿತ್ಯವೆಂದು ಹೇಳಲಾಗುತ್ತದೆ.[೧೦] ಇದರಿಂದ ವಿಚಾರವಾದಿಯಾದ ಮಾನವನು ತನ್ನ ಬೌದ್ಧಿಕ ಪ್ರಗತಿಗನುಗುಣವಾಗಿ ಪರಾ ಮರ್ಶೆ ಮಾಡತೊಡಗಿದನು. ಒಳಗಣ್ಣಿನಿಂದ ಈ ಸಾಹಿತ್ಯದ ಒಳಗನ್ನು ಪರಿ ಶೀಲಿಸತೊಡಗಿದನಾಗಿ ಆತನು ದಾರ್ಶನಿಕನಾದ. ಇವನ ಕಾರ್ಯದಿಂದ ಆಶ್ರಮ ಸಾಹಿತ್ಯವು ದಾರ್ಶನಿಕ ಸಾಹಿತ್ಯವಾಗಿ ರೂಪುಗೊಂಡಿತು. ಇದು ಎರಡನೇ ರೀತಿ. ದಾರ್ಶನಿಕರ ದಾರ್ಶನಿಕ ಕ್ರಿಯಾ ಪ್ರಾರಂಭದ ಪರಿಣಾಮ ವಾಗಿ ಸೂತ್ರಸಾಹಿತ್ಯವು ಅಸ್ತಿತ್ವದಲ್ಲಿ ಬಂತು. ಇದು ಶಾಸ್ತ್ರಸಾಹಿತ್ಯದ ಒಂದು ವಿಶೇಷ ಪ್ರಕಾರವಾಗಿರುತ್ತದೆ. ಲಾಕ್ಷಣಿಕರು ಇದನ್ನು ಹೀಗೆ ಲಕ್ಷಣಿಸುತ್ತಾರೆ :

೧೦. S. Radhakrishnan : Indian Philosophy Vol. I. P. 81 (Kegon & Raltudg)

ಲಘೂನಿ ಸೂಚಿತಾರ್ಥಾನಿ ಸ್ವಲ್ಪಾಕ್ಷರಪದಾನಿ ಚ ।
ಸರ್ವತಃ ಸಾರಭೂತಾನಿ ಸೂತ್ರಾಣ್ಯಾಹುರ್ಮನೀಷಿಣಃ ॥[೧೧]

ಸಂಕ್ಷಿಪ್ತವಾಗಿರುವ ಅರ್ಥವನ್ನು ಸೂಚಿಸುವ, ಮಿತವಾದ ಅಕ್ಷರಗಳಿಂದಲೂ ಪದಗಳಿಂದಲೂ ರಚಿಸಲ್ಪಟ್ಟಿರುವ, ಸರ್ವತಃ ಸಾರಭೂತವಾಗಿರುವ ಚಿಕ್ಕ ಪದ ಅಥವಾ ಪದಪುಂಜವು ಸೂತ್ರವು ಎಂದು ಮನೀಷಿಗಳು ಹೇಳುತ್ತಾರೆ.

ಕಾರಿಕಾ ತು ಸ್ವಲ್ಪವೃತ್ತೌ ಬಹೋರರ್ಥಸ್ಯ ಸೂಚನೀ ।[೧೨]

ಕಾರಿಕೆಯು ಸೂತ್ರದಂತೆ ಗದ್ಯಶೈಲಿಯಲ್ಲಿರದೆ ಪದ್ಯಶೈಲಿಯಲ್ಲಿರುತ್ತದೆ. ಕಾರಿಕಾವು ಅಲ್ಪ ಶಬ್ದಗಳಿಂದ ಬಹುವಾದ ಅರ್ಥವನ್ನು ಸೂಚಿಸುತ್ತದೆ. "ಕಾರಿಕೆಗಳು ಒಂದು ದೃಷ್ಟಿಯಿಂದ ವಿವರಣೆಯಾಗಿದ್ದರೂ ವಾಡಿಕೆಯ ಅರ್ಥದಂತೆ ಭಾಷ್ಯವೆಂದು ಹೇಳಲಾಗುವದಿಲ್ಲ. ಯಾವುದೋ ಒಂದು ವಿಷಯವನ್ನೋ ಅಥವಾ ಉಪದೇಶವನ್ನೋ ನೆನಪಿನಲ್ಲಿ ಇಟ್ಟುಕೊಳ್ಳಲು ರಚಿಸಿದ ಶ್ಲೋಕಗಳಾಗಿವೆ. ಕಾರಿಕೆಗಳು ಮಂತ್ರಾರ್ಥ ಇಲ್ಲವೆ ಸೂತ್ರಾರ್ಥಗಳ ವಿವರಣೆಗೆ ಅಲ್ಲಿಯ ಭಾವಗಳಿಗೆ ಅನುಸರಿಸಿ ಯುಕ್ತಿಗಳನ್ನು ಬಳಸುತ್ತವೆ ವಿಚಾರ ಪ್ರಕಾಶನಕ್ಕೆ ಪ್ರತಿಷ್ಠಾಪನೆಗೆ."

ಭಾಷ್ಯವು ಶಾಸ್ತ್ರಸಾಹಿತ್ಯದ ಬೇರೊಂದು ಪ್ರಕಾರವಾಗಿರುತ್ತದೆ. ಭಾಷ್ಯವು ಗದ್ಯಶೈಲಿಯಲ್ಲೇ ಇರುತ್ತದೆ. ಭಾಷ್ಯವು ಸೂತ್ರಗಳನ್ನು ಅಥವ ಮಂತ್ರಗಳನ್ನು ವಿವರ ವಿವರವಾಗಿ ವಿವರಿಸುವದು. ಹೀಗೆ ವಿವರಿಸುವಲ್ಲಿ ಅದು ಆಯಾ ಭಾಷ್ಯಕಾರರ ದಾರ್ಶನಿಕ ದೃಷ್ಟಿಕೋನವನ್ನು ಪ್ರತಿಪಾದಿಸುತ್ತದೆ. ಲಾಕ್ಷಣಿಕರು ಭಾಷ್ಯವನ್ನು ಹೀಗೆ ಲಕ್ಷಣಿಸುತ್ತಾರೆ:

---

೧೧. ಸಂ. ಆದಿದೇವಾನಂದ ಬ್ರಹ್ಮಸೂತ್ರಗಳು : ಬ್ರಹ್ಮಸೂತ್ರಗಳು, ಶ್ರೀ ರಾಮಕೃಷ್ಣಾಶ್ರಮ, ಮೈಸೂರು ೧೯೬೪ ಪು. ೫, ಅಡಿ ೧

೧೨. ಸಂ. ಆದಿದೇವಾನಂದ ; ಮಾಂಡೂಕ್ಯೋಪನಿಷತ್, ಶ್ರೀ ರಾಮಕೃಷ್ಣಾಶ್ರಮ. ಮೈಸೂರು, ಪುಟ ೫, ಅ. ಟಿ. ೨

ಸೂತ್ರಾರ್ಥೋ ವರ್ಣ್ಯತೇ ಯತ್ರ ವಾಕ್ಯೈಃ ಸೂತ್ರಾನುಸಾರಿಭಿಃ ।
ಸ್ವ ಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ॥[೧೩]

ಮೂಲಸೂತ್ರಗಳ ಅಕ್ಷರಗಳ ಅನುಸಾರವಾಗಿ ವಿಷಯ, ವಿಶಯ (ಸಂಶಯ), ಪೂರ್ವ ಪಕ್ಷ, ಉತ್ತರ (ಸಿದ್ಧಾಂತ) ಮತ್ತು ಸಂಗತಿಗಳನ್ನಧಿಕರಿಸಿ ವಿವರಿಸುವ ಗ್ರಂಥಕ್ಕೆ ಭಾಷ್ಯವೆಂದು ಬಲ್ಲಿದರು ತಿಳಿಸುತ್ತಾರೆ." ಷಡ್ದರ್ಶನಗಳಲ್ಲಿ ಸೂತ್ರಗಳಿರುವಂತೆ ಆ ಸೂತ್ರಗಳಿಗೆ ಭಾಷ್ಯಗಳೂ ಇರುತ್ತವೆ. ಜಿಜ್ಞಾಸುಗಳಿಗೆ ತಕ್ಕಂತೆ ಶಾಸ್ತ್ರಸಾಹಿತ್ಯ ಸೃಷ್ಟಿ. ಭಾಷ್ಯಗಳಿಂದ ದೊರೆಯದ ತೃಪ್ತಿಯನ್ನು ಅವರು ಬೇರೊಂದು ಪ್ರಕಾರದ ಶಾಸ್ತ್ರಸಾಹಿತ್ಯದಿಂದ ಪಡೆದರು. ಅದಕ್ಕೆ ವ್ಯಾಖ್ಯಾನವೆಂದು ಹೆಸರು. ವ್ಯಾಖ್ಯಾನದ ಲಕ್ಷಣವು ಈ ಪ್ರಕಾರವಿರುತ್ತದೆ:

ಪದಚ್ಛೇದಃ ಪದಾರ್ಥೋಕ್ತಿಃ ವಿಗ್ರಹೋ ವಾಕ್ಯಯೋಜನಾ ।
ಆಕ್ಷೇಪಸ್ಯ ಸಮಾಧಾನಂ ವ್ಯಾಖ್ಯಾನಂ ಪಂಚಲಕ್ಷಣಮ್ ॥[೧೪]

ಇದರಿಂದ ವ್ಯಾಖ್ಯಾನವು ಪಂಚಲಕ್ಷಣಾತ್ಮಕವಾಗಿರುತ್ತದೆಯೆಂದು ತಿಳಿದು ಬರುತ್ತದೆ. ಪದಚ್ಛೇದ ಪದಾರ್ಥೋಕ್ತಿ, ವಿಗ್ರಹ, ವಾಕ್ಯಯೋಜನೆ, ಆಕ್ಷೇಪ ಮತ್ತು ಸಮಾಧಾನ ಎಂಬುವೇ ಆ ಪಂಚಲಕ್ಷಣಗಳು. ವ್ಯಾಖ್ಯಾನಕ್ಕೆ ಟೀಕೆ ಇಲ್ಲವೆ ಟಿಪ್ಪಣಿ ಎಂಬಭಿಧಾನಗಳೂ ಇರುತ್ತವೆ. ಸುಪ್ರಸಿದ್ಧ ಭಾಷ್ಯಕಾರರಿರುವಂತೆ ಸುಪ್ರಸಿದ್ಧ ಟೀಕಾಚಾರ್ಯರೂ ಇರುತ್ತಾರೆ. ವ್ಯಾಖ್ಯಾನದ ಪಂಚ ಲಕ್ಷಣಗಳನ್ನು ನೋಡಿದಾಗ ಇದು ಭಾಷಾಶಾಸ್ತ್ರ ದೃಷ್ಟಿಕೋನಪರ ವಿವರಣೆಯೆಂದು ತಿಳಿದುಬರುತ್ತದೆ.

ಸೂತ್ರ, ಕಾರಿಕಾ, ಭಾಷ್ಯ ಮತ್ತು ವ್ಯಾಖ್ಯಾನಗಳು ಪೂರೈಸದ ಕಾರ್ಯವನ್ನು ಶಾಸ್ತ್ರಸಾಹಿತ್ಯದ ಇನ್ನೊಂದು ಪ್ರಕಾರವು ಪೂರೈಸುವದು. ಅವನ್ನು ವಾರ್ತಿಕವೆಂದು ಹೇಳುತ್ತಾರೆ. ಶಾಸ್ತ್ರಗ್ರಂಥಗಳಲ್ಲಿ ಅಂದರೆ

---

೧೩. ಶ್ರೀಕಂಠಶಾಸ್ತ್ರೀ : ಭಾರತೀಯ ಸಂಸ್ಕೃತಿ, ಪುಟ ೬೬-೬೮ ಅಡಿ ಟಿ.
೧೪. ಅದೇ.

ಸೂತ್ರಗಳಲ್ಲಿ ಕೆಲವು ಸಲ ಕೆಲವು ವಿಷಯ ಗಳನ್ನು ಬಿಟ್ಟಿರುತ್ತಾರೆ. ಒಂದೇ ಮಾತಿನಲ್ಲಿ ತಿಳಿಸಿರುತ್ತಾರೆ. ಇಂಥ ಕೊರತೆ ತುಂಬಿ ಕೊಡಲು ಈ ಪ್ರಕಾರದ ಸಾಹಿತ್ಯ ಸೃಷ್ಟಿಯಾದಂತೆ ಕಾಣುತ್ತದೆ. ವಾರ್ತಿಕವನ್ನು ಲಾಕ್ಷಣಿಕರು ಹೀಗೆ ಲಕ್ಷಣಿಸುತ್ತಾರೆ.

ಉಕ್ತಾನುಕ್ತದುರುಕ್ತಾನಾಂ ಚಿನ್ತಾ ಯತ್ರ ಪ್ರವರ್ತತೇ।
ತಂಗ್ರನ್ಥಂ ವಾರ್ತಿಕಂ ಪ್ರಾಹುಃ ವಾರ್ತಿಕಜ್ಞಾ ಮನೀಷಿಣಃ॥[೧೫]

ವಾರ್ತಿಕದ ಲಕ್ಷಣವನ್ನು ತಿಳಿಸುವ ಈ ಶ್ಲೋಕವು ಮೂಲ ಶಾಸ್ತ್ರಕೃತಿಯಲ್ಲಿ ಹೇಳಿರುವುದನ್ನೂ, ಬಿಟ್ಟುದನ್ನೂ, ದುರ್ಗಮ್ಯವಾದುದನ್ನೂ ಚಿಂತನೆ ಮಾಡುವಂಥ ವಿಧಾನಕೃತಿಯು ವಾರ್ತಿಕವೆಂದು ಕರೆಯಿಸಿಕೊಳ್ಳುವದೆಂಬ ಅಭಿಪ್ರಾಯವನ್ನು ತಿಳಿಸುತ್ತದೆ. ವಾರ್ತಿಕ ಪರಂಪರೆಯು ಉತ್ತರಭಾರತದಲ್ಲಿ ಲುಪ್ತವಾದಾಗ ಕರ್ನಾಟಕದಿಂದ ಏಳನೆಯ ಶತಮಾನದ ಆದಿಯಲ್ಲಿ ಮಿಥಿಲಾಕ್ಕೆ ಹೋದ ತ್ರಿಲೋಚನನು ಪುನರುಜ್ಜೀವನಗೊಳಿಸಿದನೆಂದು ಆತನ ಶಿಷ್ಯನಾದ ವಾಚಸ್ಪತಿ ಮಿಶ್ರ ತಿಳಿಸಿರುವುದನ್ನು ನವ್ಯನ್ಯಾಯ ಚರಿತ್ರಕಾರನು[೧೬] ಉಲ್ಲೇಖಿಸಿರುವುದು, ಕರ್ನಾಟಕದ ವಿದ್ಯಾಕೇಂದ್ರಗಳಲ್ಲಿ ಈ ಪರಂಪರೆಯು ಪ್ರಸಿದ್ಧವಾಗಿ ಬೋಧಿಸಲ್ಪಡುತ್ತಿತ್ತು, ಪ್ರಚಾರದಲ್ಲಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ವಾರ್ತಿಕದ ವಿಧಾನವು ನವ್ಯನ್ಯಾಯದ ಆವಿರ್ಭಾವಕ್ಕೆ ವಿಶೇಷ ಅವಕಾಶಕೊಟ್ಟಿದೆ ಎಂಬುದು ಏಳನೇ ಶತಮಾನದಿಂದ ಹನ್ನೊಂದನೆಯ ಶತಮಾನದ ವರೆಗೆ ಆದ ನಯ್ಯಾಯಿಕರ ಕೃತಿಗಳಿಂದ ಸ್ಪಷ್ಟವಾಗುತ್ತದೆ. ದಾರ್ಶನಿಕರ ದೃಷ್ಟಿಕೋನ ಬದಲಾವಣೆಗೆ ವಾರ್ತಿಕ ಪದ್ಧತಿಯು ಕಾರಣವಾಗಿರುವದರಿಂದ ಅದರ ಮಹತ್ವವು ಇನ್ನೂ ಹೆಚುತ್ತದೆ.

ಶಾಸ್ತ್ರಸಾಹಿತ್ಯದ ಬೇರೊಂದು ಪ್ರಕಾರವು ಇದರ ಜತೆಜತೆಯಲ್ಲಿಯೇ

---

೧೫. ಅದೇ
೧೬. Dineshchandra Bhattacharya: History of Navya-Nyaya in Mithila, P. 16

ಬೆಳೆದು ಬಂದಿರುತ್ತದೆ. ಇವರಿಂದ ಶಾಸ್ತ್ರದ ಒಂದುಭಾಗದ ವಿಶೇಷ ವಿವರಣೆಯು ನಡೆಯುತ್ತದೆ. ಲಾಕ್ಷಣಿಕರು ಅವನ್ನು ಲಕ್ಷಣಿಸಿದ್ದು ಹೀಗೆ :

ನನ್ವೇವಂ ಶಾಸ್ತ್ರಪ್ರಕರಣಯೋಃ ಕೋಃ ಭೇದ ಇತಿ ಚೇತ್ ।
ಶಾಸ್ತ್ರೈಕದೇಶಸಂಬಂದ್ಧಂ ಶಾಸ್ತ್ರಕಾರ್ಯಾಂತರೇ ಸ್ಥಿತಂ।
ಆಹುಃ ಪ್ರಕರಣಂ ನಾಮ ಗ್ರಂಥಭೇದಂ ವಿಪಶ್ಚಿತಃ ॥೧೭

ಶಾಸ್ತ್ರ ಮತ್ತು ಪ್ರಕರಣಗಳಲ್ಲಿ ಯಾವ ಭೇದವಿದೆಯೆಂದು ಕೇಳಿದ್ದಾದರೆ (ಉತ್ತರರೂಪವಾಗಿ ಹೀಗೆ ಹೇಳಬಹುದು) ಶಾಸ್ತ್ರದ ಒಂದು ವಿಷಯುಕ್ಕೆ ಸಂಬಂಧಿಸಿದ ಮತ್ತು ಶಾಸ್ತ್ರ ದಲ್ಲಿರದ ವಿಷಯುವನ್ನು ಪ್ರತಿಪಾದಿಸುವ ಗ್ರಂಥಭೇದಕ್ಕೆ ಪ್ರಕರಣವೆಂದು ಪಂಡಿತರು ಹೇಳುತ್ತಾರೆ.

ಹೀಗೆ ಒಟ್ಟಿನಲ್ಲಿ ಶಾಸ್ತ್ರದ ವಿವಿಧ ಮುಖದ ಬೋಧೆಯು ಸೂತ್ರ, ಕಾರಿಕಾ. ಭಾಷ್ಯ, ವ್ಯಾಖ್ಯಾನ, ವಾರ್ತಿಕ ಮತ್ತು ಪ್ರಕರಣ ಎಂಬ ಆರು ಪ್ರಕಾರದ ಶಾಸ್ತ್ರಸಾಹಿತ್ಯದಿಂದ ನಡೆಯುತ್ತದೆ. ಇದು ಭಾರತೀಯ ದರ್ಶನ ಸಾಹಿತ್ಯದ ವಿಶಿಷ್ಟವಾದ ಕೊಡುಗೆ ಯಾಗಿರುತ್ತದೆ.

ಕನ್ನಡದಲ್ಲಿ ಸೃಷ್ಟಿಗೊಂಡ ಮಂತ್ರರೂಪವಾದ ವಚನಸಾಹಿತ್ಯವು ಭಾರತೀಯ ಷಟ್‌ಪ್ರಕಾರವೆಂದು ಮೇಲೆ ಉಲ್ಲೇಖಿಸಿದಂಥ ಹೊಸ ತೆರನಾದ ಶಾಸ್ತ್ರಸಾಹಿತ್ಯಪ್ರಕಾರದ ಸೃಷ್ಟಿಗೆ ಆದಿಯಾಗಿರುತ್ತದೆ. ವಚನಸಾಹಿತ್ಯವು ವಿಶಿಷ್ಟ ವಿಚಾರಪ್ರಣಾಲಿ ಶಾಸ್ತ್ರವಾಗಿರುತ್ತದೆ. ಅದನ್ನು 'ಸ್ಥಲಕಟ್ಟು' ಸಾಹಿತ್ಯವೆಂದು ಹೆಸರಿಸಲಾಗಿದೆ. ಇದು ನವೀನಪ್ರಕಾರ. ಈ ಹೊಸ ಹೆಸರಿನಲ್ಲಿರುವ 'ಕಟ್ಟು' ಎಂಬುದು 'ಸೂತ್ರ'ವೆಂಬ ಪದವು ಮಾಡುವ ಕಾರ್ಯಾರ್ಥ ಸೂಚಕವಾಗಿರುತ್ತದೆ. 'ಬ್ರಹ್ಮಸೂತ್ರ'ವೆಂಬ ಪದದಲ್ಲಿಯ 'ಬ್ರಹ್ಮ' ಎಂಬ ಪದವೂ, 'ಸ್ಥಲಕಟ್ಟು' ಎಂಬ ಪದದಲ್ಲಿಯ 'ಸ್ಥಲ'ವೆಂಬ ಪದವೂ ಒಂದೇ ಬಗೆಯ ಅರ್ಥಬೋಧಕಗಳಾಗಿವೆ, ತೈತ್ತರೀಯ ಉಪನಿಷತ್ತು ಬ್ರಹ್ಮವನ್ನು ಲಕ್ಷಣಿಸುವದು.

೧೭. S. C. Vidyabhushana : A History of Indian Logic Motilal Banarasidas, p. 356 fn.

ಯತೋ ವಾ ಇಮಾನಿ ಭೂತಾನಿ ಜಾಯಂತೇ।ಯೇನ ಜಾತಾನಿ
ಜೀವಂತಿ।
ಯತ್ ಪ್ರಯಂತ್ಯಭಿಸಂವಿಶಂತಿ। ತದ್ವಿಜಿಜ್ಞಾಸಸ್ವ। ತದ್ಬ್ರಹ್ಮೇತಿ।[೧೮]

(ಯಾವುದರಿಂದ ಈ ಪ್ರಾಣಿಗಳು ಹುಟ್ಟುವುವೊ, ಹಾಗೆಯೇ ಹುಟ್ಟಿರುವುವು ಗಳು ಯಾವುದರಿಂದ ಜೀವಿಸುತ್ತವೆಯೊ ಮತ್ತು ಯಾವುದನ್ನು ಕುರಿತು ಹೋಗಿ ಪ್ರವೇಶಿಸುವುವೊ ಅದನ್ನು ತಿಳಿದುಕೊ) ಅದು (ಬ್ರಹ್ಮ) ಎಂಬ ಮಂತ್ರವು ಬ್ರಹ್ಮ ಪದದ ವಿವರಣೆ ಕೊಟ್ಟಿದ್ದು "ಬ್ರಹ್ಮಸೂತ್ರ" ಪದದಲ್ಲಿಯ 'ಬ್ರಹ್ಮ' ಪದದ ಅರ್ಥವಾಗಿರುತ್ತದೆ. ಇದರ ಜಿಜ್ಞಾಸೆಯೇ ಬ್ರಹ್ಮಸೂತ್ರಗಳ ವಿಷಯ. ಅದೇ ರೀತಿ 'ಸ್ಥಲಕಟ್ಟು' ಎಂಬ ಪದದಲ್ಲಿಯ 'ಸ್ಥಲ ಎಂಬ ಪದವನ್ನೂ ಶಾಸ್ತ್ರವು ಲಕ್ಷಣಿಸಿರುತ್ತದೆ.

ಯತ್ರಾದೌ ಸ್ಥೀಯತೇ ವಿಶ್ವಂ ಪ್ರಾಕೃತಂ ಪೌರುಷಂ ಯತಃ
ಲೀಯತೇ ಪುನರಂತೇ ಚ ಸ್ಥಲಂ ತತ್ಪ್ರೋಚ್ಯತೇ ತತಃ[೧೯]

(ಚೇತನಾಚೇತನಾತ್ಮಕವಾದ ಪ್ರಪಂಚವು ಮೊದಲು ಸ್ಥಿತಿಯನ್ನೂ ಅಂತ್ಯದಲ್ಲಿ ಲಯವನ್ನೂ ಯಾವ ತತ್ವದಲ್ಲಿ ಹೊಂದುವುದೋ ಅದೇ ಸ್ಥಲವೆಂದು ಹೇಳಲ್ಪಡುತ್ತದೆ.)

ಬ್ರಹ್ಮದ ನಾನಾ ವಿಚಾರ ಕುರಿತಿರುವ ಉಪನಿಷನ್ಮಂತ್ರ ವಿಚಾರವನ್ನು ಮಾಲೆಯಾಗಿ ಸೂತ್ರಕಾರನು ರಚಿಸಿದ್ದಾನೆ ಎಂದು ಶಂಕರರು ತಮ್ಮ ಬ್ರಹ್ಮ ಸೂತ್ರ ಭಾಷ್ಯದಲ್ಲಿ ಹೇಳಿರುವಂತೆ, ಸ್ಥಲದ ನಾನಾ ವಿಚಾರ ಕುರಿತಿರುವ ವಚನ ವಿಚಾರವನ್ನು ವ್ಯವಸ್ಥಿತ ರೀತಿಯಲ್ಲಿ ತರ್ಕಬದ್ಧವಾಗಿ ಶಾಸ್ತ್ರಕಾರನು ಇಟ್ಟಿ

---

೧೮. ಸಂ. ಆದಿದೇವಾನಂದ ; ತೈತ್ತಿರೀಯೋಪನಿಷತ್ ಭೃಗುವಲ್ಲೀ, ಮೊದಲನೆಯ ಅನುವಾಕ (ಶ್ರೀ ರಾಮಕೃಷ್ಣಾಶ್ರಮ, ೧೯೬೮).

೧೯. ಸಂ, ವೈ. ನಾಗೇಶ ಶಾಸ್ತ್ರಿಗಳು : ಶಿವಾನುಭವ ಸೂತ್ರಂ. ಮುರುಘಾಮಠ, ಧಾರವಾಡ, ಪು. ೧೬, ಶ್ಲೋಕ ೪

ದ್ದಾನೆ. 'ಸೂತ್ರ'ವು ನಾಮಪದವಾಗಿರುವಂತೆ 'ಕಟ್ಟು' ಎಂಬುದೂ ನಾಮಪದವಾಗಿದೆ. ಅದೇ ಪದವು ಕ್ರಿಯಾಪದವೂ ಆಗಿದೆ. 'ಕಟ್ಟು' ಪದವು ವ್ಯವಸ್ಥೆ ಹಾಗೂ ವ್ಯವಸ್ಥೆಗೊಳಿಸು ಎಂಬೆರಡೂ ಅರ್ಥಕೊಡುವದು. ಆದುದರಿಂದ ಬ್ರಹ್ಮಸೂತ್ರ ಎಂಬಂತೆ ಸ್ಥಲಕಟ್ಟು ಎಂಬ ಪದವು ಇರುತ್ತದೆ.

'ಸ್ಥಲಕಟ್ಟು' ಸಾಹಿತ್ಯದಲ್ಲಿ ಷಟ್‌ಸ್ಥಲ ವಚನಗಳ ಕಟ್ಟು ಮತ್ತು ಏಕೋತ್ತರ ಸ್ಥಲ ವಚನಗಳ ಕಟ್ಟು ಎಂಬ ವಿಶಿಷ್ಟ ಪ್ರಭೇದಗಳು ಶಾಸ್ತ್ರದೃಷ್ಟಿಯಿಂದ ಮಹತ್ವದ ಪದಗಳಾಗಿವೆ. 'ಷಟ್‌ಸ್ಥಲ ಕಟ್ಟು' ಶಾಸ್ತ್ರಸಾಹಿತ್ಯಪ್ರಭೇದವಾದ ಮೂಲಶಾಸ್ತ್ರಕೃತಿ. ಇದರಲ್ಲಿಯೇ ಸಂಪಾದನಾಶಾಸ್ತ್ರಸಾಹಿತ್ಯ ವಿಶಿಷ್ಟ ಪ್ರಕಾರವು ಹುಟ್ಟಲು ಅವಕಾಶವಿರುತ್ತದೆ.

'ಸಂಪಾದನೆ' ಶಾಸ್ತ್ರಸಾಹಿತ್ಯಪ್ರಕಾರದಲ್ಲಿ 'ಶೂನ್ಯಸಂಪಾದನೆ'ಗಳೆಂಬವುಗಳು. 'ಶೀಲಸಂಪಾದನೆಯ ವಚನಗಳು' ಎಂಬ ಮುಂತಾದ ಕೃತಿಗಳು ಸಮಾವೇಶಗೊಳ್ಳುತ್ತವೆ. 'ಶೂನ್ಯಸಂಪಾದನೆ'ಗಳು 'ಸ್ಥಲಕಟ್ಟು' ಸಾಹಿತ್ಯದಲ್ಲಿ ಅನುಕ್ತವಾದ, ಉಕ್ತವಾದ ವಿಷಯಗಳನ್ನು ಚರ್ಚೆಯ ರೂಪದಲ್ಲಿ ವಚನಗಳಿಂದ ಸುವ್ಯವಸ್ಥೆಗೊಳಿಸಿದ ಕೃತಿಗಳಾಗಿರುತ್ತವೆ. ಶಾಸ್ತ್ರಸಾಹಿತ್ಯದಲ್ಲಿ ಇದು ನವೀನಪ್ರಕಾರದ ಶಾಸ್ತ್ರಸಾಹಿತ್ಯವಾಗಿರುತ್ತದೆ. ವೀರಶೈವ ಶಾಸ್ತ್ರಸಾಹಿತ್ಯಜ್ಞರು ಭಾರತೀಯ ಶಾಸ್ತ್ರಸಾಹಿತ್ಯಪ್ರಕಾರ ಭಾಂಡಾರಕ್ಕೆ ಸಲ್ಲಿಸಿದ ಒಂದು ಉತ್ತಮ ಕಾಣಿಕೆಯಾಗಿರುತ್ತದೆ.

ಭಾಷ್ಯ, ವ್ಯಾಖ್ಯಾನ ಇಲ್ಲವೆ ಟೀಕಾರೂಪದಲ್ಲಿ ಸಂಸ್ಕೃತ ಹಾಗೂ ಕನ್ನಡದಲ್ಲಿಯ ಶಾಸ್ತ್ರಗ್ರಂಥಗಳಿಗೆ ಬರೆದ ಸಾಹಿತ್ಯವು ಹೇರಳವಾಗಿದೆ. ಆಗಮ, ವೇದಮಂತ್ರ, ಉಪನಿಷತ್ತು, ಬ್ರಹ್ಮಸೂತ್ರಗಳಿಗೆ ಭಾಷ್ಯ, ಟೀಕೆಗಳಿರುವಂತೆ ಬಸವಣ್ಣ ಪ್ರಭುದೇವರ ವಚನಗಳಿಗೆ, ಏಕೋತ್ತರ ಶತಸ್ಥಲ, ಬೆಡಗಿನ ವಚನ, ಮಂತ್ರಗೋಪ್ಯ, ಪದಮಂತ್ರಗೋಪ್ಯ, ಹಿರಿಯ ಮಂತ್ರಗೋಪ್ಯ, ಶಿವಯೋಗ ಪ್ರದೀಪಿಕೆ ಮುಂತಾದವುಗಳಿಗೆ ಟೀಕು ಬರೆದುದು ಸುಪ್ರಸಿದ್ಧವಿದೆ. ದರ್ಶನ ಸಾಹಿತ್ಯಪ್ರಭೇದದಂತೆ ನಡೆದ ದಾರ್ಶನಿಕ ಕಾರ್ಯವು ವೀರಶೈವ ಶಾಸ್ತ್ರಸಾಹಿತ್ಯ

ದಲ್ಲಿ ನಡೆದಿದೆ ಎಂಬುದನ್ನು ಸಿದ್ಧಗೊಳಿಸುತ್ತದೆ. ವೀರಶೈವ ಶಾಸ್ತ್ರಸಾಹಿತ್ಯಕಾರರು ಪ್ರಾಚೀನ ಪರಂಪರೆಯ ಶಾಸ್ತ್ರಸಾಹಿತ್ಯ ಪ್ರಕಾರದ ಕಾರ್ಯಮಾಡಿ ನವೀನಶಾಸ್ತ್ರಸಾಹಿತ್ಯ ಸೃಷ್ಟಿಕರ್ತರೂ ಆಗಿದ್ದಾರೆ. ದಾರ್ಶನಿಕ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನ ಸಂಪಾದಿಸಿದ್ದಾರೆ. ಈ ನಿಟ್ಟಿನಲ್ಲಿ ಇನ್ನೂ ವಿಶೇಷ ಕಾರ್ಯ ನಡೆಯಬೇಕು.

# ವಚನಶಾಸ್ತ್ರ ಮತ್ತು ಪ್ರಮಾಣ ವಿಚಾರ

## ಪ್ರಮಾಣ

ಪ್ರಮಾಣಶಾಸ್ತ್ರ ಪ್ರತಿಯೊಂದು ದರ್ಶನವೂ ಬಳಸಿಕೊಳ್ಳುವ ಮಹತ್ವದ ಶಾಸ್ತ್ರವಾಗಿದೆ. ಅದನ್ನು ಶಾಸ್ತ್ರಜ್ಞರು ತತ್ವಜ್ಞಾನಿಗಳು ತಮ್ಮ ವೈಚಾರಿಕ ಸ್ಪಷ್ಟತೆ, ಸರಳತೆ, ಸುವ್ಯವಸ್ಥಿತತೆ, ದೋಷವಿರಹಿತತೆಗಳ ದೃಷ್ಟಿಯಿಂದ ಬಳಸಿಕೊಳ್ಳುವರು. ಭಾರತೀಯ ಪುರಾತನ ತತ್ವಜ್ಞರು ಪ್ರಮಾಣ ಶಾಸ್ತ್ರವು ಎಲ್ಲ ಶಾಸ್ತ್ರಗಳನ್ನು ಪ್ರಕಾಶಗೊಳಿಸುವ ಶಾಸ್ತ್ರವೆಂದಿದ್ದಾರೆ: "ಪ್ರದೀಪ: ಸರ್ವ ಶಾಸ್ತ್ರಾಣಾಂ." ಇದು ಪ್ರಮಾಣ, ಪ್ರಮೇಯ ಮತ್ತು ಪ್ರಮಾಣಗನ್ನು ಕುರಿತು ವಿಚಾರ ಮಾಡುತ್ತದೆ. ಆದ್ದರಿಂದ ಇದು ಪ್ರಮಾಣಶಾಸ್ತ್ರ. ಈ ಶಾಸ್ತ್ರವನ್ನು ಆನ್ವೀಕ್ಷಿಶಿ, ತರ್ಕ, ನ್ಯಾಯ, ಮತ್ತು ವಾದವಿದ್ಯಾ ಎಂದು ಕರೆಯುತ್ತಾರೆ.

ಈ ಶಾಸ್ತ್ರದ ಬೇರುಗಳು ಆಸ್ತಿಕ ಶಾಸ್ತ್ರಗ್ರಂಥಗಳಲ್ಲಿ ಕಂಡುಬರುತ್ತವೆ. 'ಶ್ರುತಿಯಿಂದಲ್ಲ, ತರ್ಕದಿಂದಲ್ಲ, ಪರವಸ್ತುವಿನ ಜ್ಞಾನವು' ಎಂದು ಉಪನಿಷತ್ತುಗಳು ಹೇಳುವ ಮಾತುಗಳು. ಷಡ್ದರ್ಶನಗಳಾಗಲಿ, ಬೌದ್ಧ ಮತ್ತು ಚಾರ್ವಾಕ ದರ್ಶನಗಳಾಗಲಿ, ಜೈನದರ್ಶನವಾಗಲಿ ಅಸ್ತಿತ್ವಕ್ಕೆ ಬರುವ ಪೂರ್ವದಲ್ಲಿಯೇ ಪ್ರಮಾಣ ಗ್ರಂಥವು ತರ್ಕಶಾಸ್ತ್ರದ ಅಸ್ತಿತ್ವದ ಸುಳುಹನ್ನು ಸೂಚಿಸುತ್ತದೆ. ಪ್ರಮಾಣವೆಂದರೆ ಕರಣ ಅಥವಾ ಸಾಧನ, ಹಾಗೂ ಫಲ, ಅಥವಾ ಸಿದ್ಧಿಗಳೆಂಬ ಅರ್ಥಗಳೂ ಉಂಟು. ದಿಜ್ನಾಗನಂತೆ ಆತನ ಪೂರ್ವ ಕಾಲದ ಆಸ್ತಿಕ ದಾರ್ಶನಿಕರೂ ಸಹ 'ಪ್ರಮಾಣ' ಶಬ್ದವನ್ನು ಬಳಸಿದ್ದು

ಕಂಡುಬರುತ್ತವೆ. 'ಕರಣ' ಮತ್ತು 'ಫಲ'ವೆಂಬೆರಡರಲ್ಲಿಯೂ ಭೇದವನ್ನವರು ಕಾಣದ್ದರಿಂದ 'ಪ್ರಮಾಣ' ಶಬ್ದದಲ್ಲಿ ಅವರು ಭೇದವನ್ನು ಕಾಣಲಿಲ್ಲ. ಒಂಬತ್ತನೆಯ ಶತಮಾನದ ಆಸ್ತಿಕ ದಾರ್ಶನಿಕನಾದ ಕನ್ನಡಿಗ ತ್ರಿಲೋಚನಾಚಾರ್ಯನು ಉತ್ತರ ಭಾರತದಲ್ಲಿ ಮಾಯವಾಗಿದ್ದ 'ವಾರ್ತಿಕ' ಪರಂಪರೆಯನ್ನು ಉದ್ಧರಿಸಿ ಮಿಥಿಲಾ ವಿಶ್ವವಿದ್ಯಾಲಯದ ಪ್ರಾಚಾರ್ಯನಾಗಿ ಪ್ರತ್ಯಕ್ಷ ಪ್ರಮಾಣವನ್ನು ನವೀನ ರೀತಿಯಲ್ಲಿ ಲಕ್ಷಣಿಸಿದುದರ ಪರಿಣಾಮದಿಂದ ಆತನ ಶಿಷ್ಯೋತ್ತಮ ವಾಚಸ್ಪತಿ ಮಿಶ್ರ ಹಾಗೂ ಕಾಶ್ಮೀರದಲ್ಲಿ ಸೆರೆಮನೆವಾಸದಲ್ಲಿದ್ದು ರಚಿಸಿದ 'ನ್ಯಾಯ ಮಂಜರಿ' ಎಂಬ ಗ್ರಂಥಕರ್ತೃವಾದ ಜಯಂತ ಇವರಿಬ್ಬರು 'ಪ್ರಮಾಣ' ಪದವನ್ನು ಪೂರ್ವದ ನೈಯ್ಯಾಯಿಕರಂತೆ ಬಳಸಿಕೊಂಡು ಹೋಗದೆ ಅದನ್ನು ವಿಶೇಷ ರೀತಿಯಲ್ಲಿ ಲಕ್ಷಣಿಸಿದರು. "The Nyaya—Vaisesika, on the other hand, at least From the time of Vacaspatimisra and Jayanta, maintain the difference between the two–one being the 'means' and the other, the 'Resultant Knowledge."[೨] ಒಂದು ಪ್ರಮಾಣ ಮತ್ತೊಂದು ಪ್ರಮಾಣ ಇವೆರಡು ಭಿನ್ನ ಭಿನ್ನವೆಂದು ತಿಳಿಸಿದರು. ಅಂದಿನಿಂದ ಆ ಪದಕ್ಕೆ ಹೊಸ ಅರ್ಥ ಬಂದಿತು. ಆ ಖಚಿತಾರ್ಥದ ಬಳಕೆಯೂ ಪ್ರಾರಂಭವಾಯಿತು. ಬೌದ್ಧರು ಇಟ್ಟುಕೊಂಡು ಬಂದ ಅರ್ಥ ಮತ್ತು ವಾಚಸ್ಪತಿ ಮಿಶ್ರನಿಂದ ಇತ್ತೀಚಿನ ಆಸ್ತಿಕ ದಾರ್ಶನಿಕರ ಬದಲಾದ ಅರ್ಥಗಳು ಅವರವರು ಒಪ್ಪಿಕೊಂಡ ವಸ್ತುಸಿದ್ಧಾಂತಕ್ಕೆ ಅನುಗುಣವಾಗಿ ಇದ್ದಿರಲು ಸಾಕು. ಇದು ಪ್ರಮಾಣ ಹಾಗೂ ಅದರ ತಾತ್ವಿಕ ವಿಚಾರಗಳ ಮೂಲವು.

೧. ಭಾರತೀಯ ಆಸ್ತಿಕ ಮತ್ತು ನಾಸ್ತಿಕ ದಾರ್ಶನಿಕರು ಪ್ರಮಾಣಗಳನ್ನು ಬಳಸಿಕೊಂಡಿದ್ದು ಅವುಗಳ ಸಂಖ್ಯೆ ಭಿನ್ನಭಿನ್ನವಾಗಿವೆ. ಸಾಂಖ್ಯ ಯೋಗ ದರ್ಶನವು ಪ್ರತ್ಯಕ್ಷ. ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣಗಳನ್ನು ಬಳಸಿಕೊಂಡರೆ. ನ್ಯಾಯ ವೈಶೇಷಕರು ಪ್ರತ್ಯಕ್ಷ. ಅನುಮಾನ ಉಪಮಾನ, ಮತ್ತು ಶಬ್ದ ಎಂಬ ನಾಲ್ಕು ಪ್ರಮಾಣಗಳನ್ನು ಒಪ್ಪಿಕೊಳ್ಳುತ್ತಾರೆ. ಪೂರ್ವ ಮೀಮಾಂಸಕರಲ್ಲಿ ಪ್ರಭಾಕರರು ಪ್ರತ್ಯಕ್ಷ, ಅನುಮಾನ, ಉಪ

ಮಾನ, ಶಬ್ದ, ಅರ್ಥಾಶಕ್ತಿ ಅನುಪಲಬ್ಧಿ ಎಂಬ ಆರು ಪ್ರಮಾಣಗಳನ್ನು ಒಪ್ಪಿಕೊಳ್ಳುತ್ತಾರೆ. ಅದ್ವೈತರೂ ಕೂಡ ಭಟ್ಟ ಮತದವರು ಹೇಳುವ ಆರು ಪ್ರಮಾಣಗಳನ್ನು ಒಪ್ಪಿಕೊಳ್ಳುತ್ತಾರೆ. ಮಾಧ್ವರು ಕೇವಲ ಮತ್ತು ಅನುಮಾನ ಪ್ರಮಾಣಗಳನ್ನು ಒಪ್ಪಿಕೊಂಡು ಅನುಮಾನ ಪ್ರಮಾಣದಲ್ಲಿ ಪ್ರತ್ಯಕ್ಷ, ತರ್ಕ. ಮತ್ತು ಶಬ್ದಗಳನ್ನು ಸೇರಿಸುವರು. ಕೇವಲ ಪ್ರಮಾಣದಲ್ಲಿ ಕೂಡ ಅವರು ಚತುರ್ವಿಧವನ್ನು ಮಾಡಿದರೂ ಮನುಷ್ಯನಿಗೆ ಅನ್ವಯಿಸುವ ಕೇವಲವು ಮಾತ್ರ ಒಂದೇ ಒಂದು. ಅನುಮಾನ ಪ್ರಮಾಣದಲ್ಲಿಯ ಮೂರು ಹಾಗೂ ಕೇವಲ ಪ್ರಮಾಣದ ಒಂದು ಹೀಗೆ ಒಟ್ಟಿಗೆ ನಾಲ್ಕು ಪ್ರಮಾಣಗಳನ್ನು ಮಾಧ್ವರು ಮಾನಿಸುತ್ತಾರೆ. ರಾಮಾನುಜರು ವೇದಾಂತಿಗಳೇ ಆದರೂ ವಿಶಿಷ್ಟಾದ್ವೈತಿಗಳು. ಅವರ ಪ್ರಕಾರ ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಮೂರು ಪ್ರಮಾಣಗಳು ಉಂಟು.

೨. ಇನ್ನು ನಾಸ್ತಿಕ ದಾರ್ಶನಿಕರಲ್ಲಿ ಚಾರ್ವಾಕರು ಪ್ರತ್ಯಕ್ಷವೆಂಬ ಒಂದು ಪ್ರಮಾಣವನ್ನು ಒಪ್ಪುವರು. ಬೌದ್ಧರು ಪ್ರತ್ಯಕ್ಷ ಅನುಮಾನ ಎಂದು ಎರಡು ಪ್ರಮಾಣಗಳನ್ನು ಮಾನಿಸಿದರೆ ಜೈನರು[೩] ಪ್ರತ್ಯಕ್ಷ ಮತ್ತು ಪರೋಕ್ಷವೆಂಬ ಎರಡು ಪ್ರಮಾಣಗಳನ್ನು ತಿಳಿಸಿ ಪ್ರತಿಯೊಂದರಲ್ಲಿ ಪುನಃ ಭಾಗಗಳನ್ನು ಮಾಡುವರು ಪ್ರತ್ಯಕ್ಷ : (೧) ವ್ಯಾವಹಾರಿಕ ಮತ್ತು (೨) ಪಾರಮಾರ್ಥಿಕವೆಂದು ಎರಡು ಪ್ರಕಾರಗಳು ಪರೋಕ್ಷ : (೧) ಅನುಮಾನ ಮತ್ತು (೨) ಆಗಮ ಎಂದು ಎರಡು ಪ್ರಕಾರಗಳು. ಪರೋಕ್ಷ : ಕೆಲವು ಸಲ ಉಪಮಾನ ಅರ್ಥಾಪತ್ತಿ ಹಾಗೂ ಅನುಪಲಬ್ಧಿಗಳನ್ನು ಒಪ್ಪಿದರೆ, ಕೆಲವು ಸಲ ತಿರಸ್ಕರಿಸುವರು. ಹೀಗೆ ಭಾರತೀಯ ಆಸ್ತಿಕ ಮತ್ತು ನಾಸ್ತಿಕ ದರ್ಶನಕಾರರು ಒಪ್ಪಿಕೊಂಡ ಪ್ರಮಾಣಗಳು ಇಂತಿವೆಯೆಂದು ಗೊತ್ತಾಗುತ್ತದೆ. ಇದಲ್ಲದೆ ಗೌತಮನ ನ್ಯಾಯ ಸೂತ್ರಗಳ ಭಾಷ್ಯಕಾರರು[೪] ಪೌರಾಣಿಕರೆಂಬುವರು ಏಳು ಇಲ್ಲವೆ ಎಂಟು ಪ್ರಮಾಣಗಳನ್ನು ಒಪ್ಪಿಕೊಳ್ಳುತ್ತಾರೆಂದು ಹೇಳುತ್ತಾರೆ.

**ಭಾರತೀಯರ ಪ್ರಮಾಣ ಚರಿತ್ರೆಯಲ್ಲಿ ವಚನಕಾರರ ಪ್ರಮಾಣಗಳ ಉಲ್ಲೇಖವೇಕಿಲ್ಲ ?**

ಇಲ್ಲಿಯವರೆಗೆ ಮಾಡಿದ ವಿವರಣೆಯಿಂದ ಭಾರತೀಯ ದರ್ಶನಗಳು

ಹಾಗೂ ಅವರು ಒಪ್ಪಿಕೊಂಡ ಪ್ರಮಾಣಗಳು ಗೊತ್ತಾಗುತ್ತವೆ. ಅಲ್ಲದೆ ಪೌರಾಣಿಕರ ಹಾಗೂ ಅವರ ಪ್ರಮಾಣಗಳ ಉಲ್ಲೇಖವೂ ಬರುತ್ತದೆ. ಆದರೆ ಷಟ್‌ಸ್ಥಲ ದರ್ಶನ ಅಥವಾ ವೀರಶೈವ ದರ್ಶನದ ಉಲ್ಲೇಖ ಅಥವಾ ಅದು ಬಳಸಿಕೊಂಡ ಪ್ರಮಾಣಗಳ ಉಲ್ಲೇಖವು ಕಂಡು ಬರುವುದಿಲ್ಲ ಭಾರತೀಯ ಪ್ರಮಾಣ ಶಾಸ್ತ್ರದ ಚರಿತ್ರೆಯಲ್ಲಿ. ಇದಕ್ಕೆ ಕಾರಣಗಳು ಇಲ್ಲದಿಲ್ಲ. (೧) ಈ ದರ್ಶನವನ್ನು ಪ್ರತಿಪಾದಿಸಿದವರು ಭಾಷ್ಯಕಾರರು, ವೃತ್ತಿಕಾರರು. ಟಿಪ್ಪಣಿ ಕಾರರು ವ್ಯಾಖ್ಯಾನಕಾರರು, ಕಾರಿಕಾಕಾರರು, ವಾದ ಕೃತಿಕಾರರು ಎಂದು ಹೀಗೆ ಅನೇಕರಿದ್ದು ಅವರಲ್ಲಿ ಶ್ರೀಪತಿ ಪಂಡಿತ, ದುರ್ವಾಸ, ಬೋಧಾಯನಾಯನರು, ಶಂಕರಾರ್ಯ, ಹರದತ್ತ, ತ್ರಿಲೋಚನ, ಅಘೋರಶಿವ, ಸರ್ವಾತ್ಮಶಂಭು, ಭೂತಿ ಕಂಠ,[೫] ಮಂಚಣ ಪಂಡಿತ, ಮಲ್ಲಣಾರ್ಯ, ಮರಿತೊಂಟದಾರ್ಯ, ಮುಂತಾ ದವರು ಸುಪ್ರಸಿದ್ಧರು. ಇವರು ಸಂಸ್ಕೃತ ಪಂಡಿತೋತ್ತಮರು. ಇವರು ಕ್ರಿ.ಶ. ೬ನೇ ಶತಮಾನದಿಂದ ಪ್ರಾರಂಭವಾದ ಪ್ರಮಾಣ ವಿಚಾರ ವಿವೇಚನೆಯಲ್ಲಿ ಅಥವಾ ವಾದ ವಿವಾದಗಳಲ್ಲಿ ಭಾಗವಹಿಸಿದಂತೆ ಕಂಡು ಬರುವುದಿಲ್ಲ ಇಲ್ಲಿಯ ವರೆಗೆನಡೆದ ಸಂಶೋಧನೆಯಿಂದ. ಇಲ್ಲವೆ ಈ ದರ್ಶನದ ವಿದ್ಯಾರ್ಥಿಗಳು ಬೇರೆ ಯುವರಾದರೂ ಈ ಪ್ರಮಾಣಶಾಸ್ತ್ರ ಚರಿತ್ರೆಗೆ ತಮ್ಮ ಕೊಡುಗೆ ಏನು ಎಂಬು ದರ ಅಧ್ಯಯನ ಮಾಡಿ ತಿಳಿಸಿದಂತೆಯೂ ತಿಳಿದು ಬರುವುದಿಲ್ಲ. (೨) ಮೇಲೆ ಉಲ್ಲೇಖಿಸಿದ ಭಾಷ್ಯ, ವ್ಯಾಖ್ಯಾನ ಪ್ರಕರಣ ಮುಂತಾದವುಗಳನ್ನು ಬರೆದವರ ಕೃತಿಗಳನ್ನು ಪ್ರಮಾಣಗಳ ಅಧ್ಯಯನದ ದೃಷ್ಟಿಯಿಂದ ಸಮೀಕ್ಷೆಯನ್ನು ಮಾಡಿರುವುದೂ ಇಲ್ಲಿಯುವರೆಗೆ ಕಂಡು ಬರುವುದಿಲ್ಲ. ಒಟ್ಟಿನಲ್ಲಿ ಪ್ರಮಾಣ ಶಾಸ್ತ್ರದ ಚರ್ಚಾತ್ಮಕ ಅಥವಾ ಬೆಳವಣಿಗೆ ಯಾತ್ಮಕ ಚರಿತ್ರದ ದೃಷ್ಟಿಯಿಂದ ಭಾರತೀಯ ಈ ಮಹಾ ವೈಚಾರಿಕ ಯಾತ್ರೆಯಲ್ಲಿ ಇವರು ಕೈಗೊಂಡ ಪಾತ್ರದ ಉಲ್ಲೇಖವಾಗದೇ ಇದ್ದಿರಬಹುದು. (೩) ಅದೇ ರೀತಿ ವಚನಕಾರರ ಸಾಹಿತ್ಯವನ್ನು ಓದುತ್ತ ಬಂದವರು ಈ ಎಂಟು ನೂರು ವರ್ಷಗಳಲ್ಲಿ ವಚನಗಳಲ್ಲಿರುವ ವೈಚಾರಿಕ ಕಾರ್ಯ ವಿಶ್ಲೇಷಣೆಯಲ್ಲಿ ತೊಡಗಿ ಅದರಲ್ಲಿ ಪ್ರಮಾಣಗಳ ಉಲ್ಲೇಖ ಮಾಡಿದ್ದು ಕಂಡುಬರುವುದಿಲ್ಲ. ವೀರಶೈವ ದರ್ಶನಕ್ಕೆ ಮೂಲ ಮಾತೃಕೆಗಳಂತಿರುವ ವಚನಗಳು ಶಾಸ್ತ್ರಗಳೆಂದು ಅಥವಾ ಆಗಮ ವೆಂದು ಹೆಸರಿಸಲಾಗಿದ್ದು ಬೌದ್ಧರ ತ್ರಿಪಿಟಕಗಳಂತಿವೆ ಷಟ್‌ಸ್ಥಲಗಳ ಕಟ್ಟು. ಇವುಗಳ ಪರಿಶೀಲನೆ ನಡೆಯ ಶೋಧನ ಸಂಪಾದನೆಗಳು ಮುಂತಾದುವುಗಳು.

ಬೇಕು. ಈ ಕೃತಿಗಳಲ್ಲಿ ಅಡಗಿರುವ ದಾರ್ಶನಿಕ ಚಟುವಟಿಕೆಗಳ ಮೂಲತತ್ವದ ಪರಿಚಯ ಮಾಡಿಕೊಳ್ಳಬೇಕು. ವಚನಗಳಲ್ಲಿ ಉಲ್ಲೇಖವಾಗುವ ಅನ್ವೀಕ್ಷಿಕಿಯ ಅಂಶಗಳು ಯಾವುವೆಂಬುದನ್ನು ಕಲೆಹಾಕಬೇಕು. ಅದೇ ರೀತಿ ಹನ್ನೆರಡನೆಯ ಶತಮಾನದ ಅನಂತರದ ಭಾರತೀಯ ಪರಿಸರದಲ್ಲಿ ನಡೆದ ದಾರ್ಶನಿಕ ಚಟುವಟಿಕೆಗಳ ಹಿನ್ನೆಲೆಯಲ್ಲಿ ಅವುಗಳನ್ನು ಹಾಗೂ ಸಂಪಾದಿತ ಕೃತಿಗಳಲ್ಲಿ ಆಯಾ ಸಂಪಾದಕರಲ್ಲಿಯ ತಾರ್ಕಿಕ ತಾತ್ವಿಕ ಪ್ರಜ್ಞೆಯ ಕಾರ್ಯವನ್ನೂ ಪರಿಶೀಲಿಸಬೇಕು. ಆಗ ನಮಗೆ ವಚನಕಾರರ ಮತ್ತು ಆ ವಚನಗಳನ್ನು ತೆಗೆದುಕೊಂಡು ಸೃಷ್ಟಿಸಿದ ಶಾಸ್ತ್ರಗ್ರಂಥಗಳಲ್ಲಿರುವ ಪ್ರಮಾಣ ಶಾಸ್ತ್ರ ಪ್ರಜ್ಞೆಯು ಯಾವ ರೀತಿಯಿಂದ ಕೆಲಸ ಮಾಡುತ್ತಿತ್ತೆಂಬುದರ ಸ್ಥೂಲ ವಾದ ಬಾಹ್ಯರೇಷೆಯ ಪರಿಚಯವಾದರೂ ಆಗಬಲ್ಲುದೇನೋ.

ಸಂಸ್ಕೃತ ಸಾಹಿತ್ಯದಲ್ಲಿಯ ಶಾಸ್ತ್ರಕೃತಿಗಳನ್ನು ಸೃಷ್ಟಿಸಿದ ಭಾಷ್ಯಕಾರರ, ಪ್ರಕರಣಕಾರರ, ವೃತ್ತಿಕಾರರ, ವ್ಯಾಖ್ಯಾನಕಾರರ ಕೃತಿಗಳಲ್ಲಿ ಷಟಸ್ಥಲ ಶಾಸ್ತ್ರದ ತಾರ್ಕಿಕ ದೃಷ್ಟಿಕೋನವೇನೆಂಬುದನ್ನವರು ತಾತ್ವಿಕ ದೃಷ್ಟಿಕೋನ ಪ್ರತಿಪಾದನೆಯಲ್ಲಿ ವ್ಯಕ್ತಪಡಿಸಿರಲಿಲ್ಲವೇನೆಂದಲ್ಲ. ಅವರು ಪ್ರಮಾಣಶಾಸ್ತ್ರ ರಚನೆಯಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿಲ್ಲವೆಂದ ಮಾತ್ರಕ್ಕೆ ಅವರಿಗೆ ಪ್ರಮಾಣಶಾಸ್ತ್ರದ ಪರಿಚಯವಿದ್ದಿರಲಿಲ್ಲವೆಂದು ಬಗೆಯಬೇಕಾಗಿಲ್ಲ. ಗುಬ್ಬಿಯ ಮಲ್ಲಣಾರ್ಯರು ವಾತುಲಾಗಮಕ್ಕೆ ಬರೆದ ಟೀಕೆಯಲ್ಲಿ ಷಟಸ್ಥಲ ದರ್ಶನವು ಬಳಸಿಕೊಂಡ ಪ್ರಮಾಣಗಳನ್ನು ಉಲ್ಲೇಖಿಸಿದ್ದಾರೆ. ಅಲ್ಲಿ ಪ್ರತ್ಯಕ್ಷ, ಅನುಮಾನ, ಆಗಮ ಮತ್ತು ಅರ್ಥಾಪತ್ತಿ ಎಂಬ ನಾಲ್ಕು ಪ್ರಮಾಣಗಳನ್ನು ಅಂಗೀಕರಿಸಲಾಗಿದೆ. ಆಗಮಗಳ ಆಧಾರದಿಂದ ಈ ಸಂಗತಿಯು ಪ್ರಥಮ ಸಲ ಜನಮನದೆದುರಿಗೆ ಬಂದುದು ಷಟಸ್ಥಲ ಜ್ಞಾನಸಾರಾಮೃತ ಗ್ರಂಥ ಸಂಪಾದಕೀಯದಲ್ಲಿ[೬] ಮಲ್ಲಣಾರ್ಯರ ಪ್ರಮಾಣಗಳು ಆಗಮಾಧಾರಿತವಾಗಿವೆ, ಇವರು ವೀರಶೈವ ಸಂಸ್ಕೃತ ದರ್ಶನ ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡಿದ್ದು ಇವರಿಂದ ವೀರಶೈವ ದರ್ಶನಕ್ಕೆ ಗಮನೀಯ ಸೇವೆ ಸಲ್ಲಿಸಿದ್ದು, ಷಟ್‌ಸ್ಥಲ ದರ್ಶನಕ್ಕೆ ಸಂಬಂಧಿಸಿದ ಸಂಸ್ಕೃತ–ಸಾಹಿತ್ಯ ಸಮೀಕ್ಷೆ ಮಾಡುವುದರಿಂದ ಇಂಥ ಪ್ರಮಾಣಗಳ ಬಳಕೆ, ಅವುಗಳ ಲಕ್ಷಣಗಳ ವಿಶೇಷಜ್ಞಾನ, [illegible] ಕೃತಿ

ಗಳಲ್ಲಿರುವ ಪ್ರಮಾಣಗಳ ಸಂಖ್ಯೆ ತಿಳಿದು ಬರುವುದು. ಈ ಕಾರ್ಯವು ವೀರ ಶೈವ ಅಥವಾ ಷಟಸ್ಥಲ ದರ್ಶನದ ಸಂಸ್ಕೃತ–ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಉತ್ತಮ ಅವಕಾಶವನ್ನೊದಗಿಸುತ್ತದೆ. ವಚನಶಾಸ್ತ್ರ ಅಥವ ವಚನಾಗಮವೂ ಕೂಡ ಸಂಸ್ಕೃತ ವೀರಶೈವ ಸಾಹಿತ್ಯದಂತೆ ಮಹತ್ವದ ಸಾಹಿತ್ಯವಾಗಿದೆ. ಇದರ ಸಮೀಕ್ಷೆ ಕೂಡ ಆಗಬೇಕು. ಆಗ ವಚನಕಾರರು ಒಪ್ಪಿಕೊಂಡ ಪ್ರಮಾಣಗಳಾವುವು ಎಂಬುದು ಕಂಡುಬರುತ್ತದೆ. ಈ ದೃಷ್ಟಿ ಯಿಂದ ನಾನು ಇಲ್ಲಿ ಆ ಕಾರ್ಯವನ್ನು ಕೈಗೆತ್ತಿಕೊಂಡಿದ್ದೇನೆ. ಅದರಲ್ಲೂ ಸುಪ್ರಸಿದ್ಧ ವಚನಕಾರರಾದ ಬಸವಣ್ಣ ಚನ್ನಬಸವಣ್ಣ, ಪ್ರಭುದೇವರು ಇವರ ವಚನಗಳ ಸಮೀಕ್ಷೆಗೆ ನನ್ನ ಕಾರ್ಯವನ್ನು ಸೀಮಿತಗೊಳಿಸಿಕೊಂಡಿದ್ದೇನೆ.

## ವಚನಕಾರರಿಗೆ ಪ್ರಮಾಣಗಳ ಅವಶ್ಯಕತೆ ಇದೆಯೆ ?

ಪ್ರಮಾಣಗಳ ಅವಶ್ಯಕತೆಯನ್ನು ಕುರಿತು ವಿಚಾರ ಮಾಡುವಾಗ ವಚನ ಕಾರರ ಕಾರ್ಯಕ್ಷೇತ್ರಗಳಾವುವೆಂಬುದನ್ನು ಅರಿತುಕೊಳ್ಳಬೇಕು. ಅವರು ಪರ ಮಾರ್ಥ ಮತ್ತು ಲೌಕಿಕಗಳನ್ನು ಇಲ್ಲವೇ ಮುಕ್ತಿ–ಭುಕ್ತಿಗಳನ್ನು ಸಮನ್ವಯೀ ಕರಿಸಿಕೊಂಡು ಬದುಕಿದವರು. ಅದೇ ರೀತಿ ಅವರು ಸಕಲ ಜೀವಾತ್ಮರಿಗೆ ಲೇಸನೇ ಬಯಸಿ ಪರಮಾತ್ಮ ಭ್ರಾತೃತ್ವದಿಂದ ಬದುಕುವ ಸಾಮಾಜಿಕ ದೃಷ್ಟಿ ಕೋನವುಳ್ಳವರು. 'ನೀನು ಎಳೆಯ ನಾನು ಹಳೆಯಂ' ಎಂಬ ಪ್ರಣಾಲಿಯನ್ನು ತಿಳಿದು, ತಿಳಿಸಿ, ಇಲ್ಲಿ ಸಲ್ಲುವ ಆದರ್ಶದಿಂದ ಸ್ಫೂರ್ತಿ ಹೊಂದಿ ಇಹದ ಹಿರಿಮೆ ಮರೆದು ಅಲ್ಲಿ ಸಲ್ಲಲು ಸಿದ್ಧಗೊಳ್ಳುವ ಕಮ್ಮಟವೆಂಬುದಿದೆಂದು ತೋರಿದವರು ಶಿವಶರಣರು. ಇದು ವಿಶ್ವದೇವ ಬಂಧುತ್ವವಾದವೇ. 'ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ' ಎಂಬ ವೈಯಕ್ತಿಕ ಪರಿಪೂರ್ಣ ಆದರ್ಶದ ಸೃಷ್ಟಿ, ಸಂರಕ್ಷಣೆ, ಫಲಸಿದ್ಧಿ ನಿರೀಕ್ಷಕರೂ ಅಹುದು. ವಚನಕಾರರು ಅನುಭಾವಿಗಳೆಂಬುದನ್ನು ಯಾರೂ ಒಪ್ಪುವರು. ಸುಪ್ರಸಿದ್ಧರಾದ ಆ ಶಿವಾನುಭವಿಗಳು ವೈಯುಕ್ತಿಕ ಮುಕ್ತಿಗೆ ತಮ್ಮ ಜೀವನ ವನ್ನು ಮುಡಂಪಿಟ್ಟು ಶರಣಸತಿಯಾಗಿ ಪರಿಶಿವನ ಸೇವೆ ಶೃಂಗಾರಗಳಲ್ಲಿ ಉಳಿ ಯದೆ ಸುತ್ತಲೂ ಶಿವನ ಷಡೈಶ್ವರ್ಯ ಪ್ರತಿಷ್ಠೆಗೊಂಡು ಜಗದ ಜೀವನವು ಮಂಗಲ ಮಹೋತ್ಸವವಾಗುವಂತೆ ಅವರು ಸಾಂಸ್ಕೃತಿಕ ಕ್ರಾಂತಿಯನ್ನು

ಮಾಡಿದರೆಂಬುದನ್ನು ಚರಿತ್ರಕಾರರು ಎತ್ತಿ ತೋರಿಸುತ್ತಾರೆ. ಆದುದರಿಂದ ಅವರು ಕೇವಲ ಅನುಭಾವಿಗಳಲ್ಲ. ಅವರು ಅನುಭಾವದ ಜೊತೆಗೆ ಧಾರ್ಮಿಕ ಮತ್ತು ಸಾಮಾಜಿಕ ಪರಂಪರಾಗತ ರೂಢಿ, ವಿಚಾರಗಳನ್ನು ತೀಕ್ಷ್ಣ ವೈಚಾರಿಕ ಒರೆಗಲ್ಲಿಗೆ ಹಚ್ಚಿ ಅವುಗಳಲ್ಲಿ ತಮ್ಮ ತಾತ್ವಿಕ ನಿಲುವಿಗೆ ಇಲ್ಲವೆ ಅದರ ಕಾರಣವಾದ ನಿಶ್ಯಬ್ದಕ್ಕೆ ಅನುಗುಣವಾಗಿ ಆಮೂಲಾಗ್ರವಾದ ಬದಲಾವಣೆಯ ವಿಚಾರ ಪ್ರತಿಪಾದಿಸಿದ್ದಾರೆ. ಆಚರಣೆಗೆ ಇಳಿಸಿದ್ದಾರೆ. ಅವರ ವಚನಗಳಲ್ಲಿ ಈ ಸಂಗತಿಗಳು ನಿಚ್ಚಳವಾಗಿ ಕಂಡುಬರುತ್ತವೆ. ಈ ಅರ್ಥದಲ್ಲಿ ಅವರು ಸಾಮಾಜಿಕ ತತ್ವಜ್ಞರು ಅಥವ ದಾರ್ಶನಿಕರು. ಅವರು ತನ್ಮೂಲಕ ಹೊಸ ಯುಗ ಪ್ರವರ್ತಕರಾದರು. "ವೇದವನೋದಿದವರ ಮುಂದೆ ಅಳುಕಂಡಯಾ ಹೋತೆ, ಶಾಸ್ತ್ರವನೋದಿದವರ ಮುಂದೆ ಅಳುಕಂಡಯಾ ಹೋತೆ" ಎಂಬ ಮಾತಿನಲ್ಲಿ ಇರುವ ಕಳಕಳಿಯಲಿ ಆಪ್ತವಾಕ್ಯ ಪ್ರಮಾಣವನ್ನು ಖಂಡಿಸುವಲ್ಲಿ ಪ್ರಮಾಣ ನಿಷೇಧ ಕಂಡು ಬಂದರೆ, "ಕೂಡಲ ಸಂಗಮ ದೇವನಲ್ಲದೆ ಇಲ್ಲ ವೆಂದಿತ್ತು ವೇದ" ಎಂಬ ಮಾತಿನ ಆಪ್ತವಾಕ್ಯವನೆತ್ತಿ ಒಪ್ಪಿಕೊಳ್ಳುವುದನ್ನು ನೋಡುತ್ತೇವೆ. "ಭಕ್ತಿಯೆಂಬ ನಿಧಾನವ ಸಾಧಿಸುವರೆ, ಶಿವಪ್ರೇಮವೆಂಬ ನಿಧಾನವ ನಚ್ಚಿಕೊಂಬುದು", "ಪುಣ್ಯವೆಂಬುದು ತಮ್ಮಿಷ್ಟ ಕಂಡಿರೆ, 'ಅಯ್ಯಾ' ಎಂದಡೆ ಸ್ವರ್ಗ; 'ಎಲವೊ' ಎಂದಡೆ ನರಕ! "ದೇವಾ ಭಕ್ತ ಜಯಾಜೀಯಾ ಎಂಬ ನುಡಿಯೊಳಗೆ ಕೈಲಾಸವಿದ್ದುದೇ, ಕೂಡಲ ಸಂಗಮದೇವಾ" ಎಂಬ ವಚನದಲ್ಲಿಯ ತರ್ಕಬದ್ಧತೆ ತೋರುತ್ತದೆ. "ಐದಿಂದ್ರಿಯ ತಿಳಿದಲ್ಲದೆ ಒಂದಿಂದ್ರಿಯ ಗುಣ ತಿಳಿಯಲಾಗದು" ಎಂಬಲ್ಲಿ ಪಂಚೇಂದ್ರಿಯಗಳ ಅಥವಾ ಪ್ರತ್ಯಕ್ಷದ ಬಳಕೆಯ ಮಹತ್ವ ತಿಳಿಯುತ್ತದೆ.

ಇನ್ನು ಅನುಭಾವ ಕ್ಷೇತ್ರವು ವಚನಕಾರರನ್ನು ಅತಿಮಾನವರ ಅಥವಾ ದೇವತೆಗಳ ಅಥವಾ ಇನ್ನೂ ಹೆಚ್ಚಿನ ಅವಸ್ಥೆಗೆ ಏರಿಸುತ್ತದೆಯೆಂದು ಅಭಿಪ್ರಾಯವಿರುವುದರಿಂದ ಇದು ಪ್ರಮಾಣಶಾಸ್ತ್ರಕ್ಕೆ ಅತೀತವೆಂಬ ವಾದವು ಈ ವಿಚಾರ ದೃಷ್ಟಿಯನ್ನು ಬೆಳಸಿಕೊಂಡು ಬರುವುದಕ್ಕೆ ಪೋಷಕವಾಗಿದೆ. ಇದಕ್ಕೆ ಉಪನಿಷತ್ತು ವಚನಗಳು ಆಧಾರವಾಗಿವೆ. 'ನೈಷಾತರ್ಕೇಣ ಮತಿರಾಪನೇಯಾ' ಆತ್ಮಜ್ಞಾನವು ತರ್ಕದಿಂದ ಪಡೆಯುತಕ್ಕದ್ದಲ್ಲ ಎಂದು ಕಠೋಪ

ನಿಷತ್ತು ತಿಳಿಸುತ್ತದೆ. 'ಭಾವಕ್ಕಿಂಬಿಲ್ಲ ಶಬ್ದ ಮೀಸಲು ನೋಡಾ' 'ಉಪಮೆ ಉಪಮಿಸಲರಿಯದೆ. ಅರಿವು ಪರಾಪರವನುತ್ತಿದ್ದಿತ್ತು. ಧ್ಯಾನ ಧ್ಯಾನಿಸಲರಿಯದೆ, ಧ್ಯಾನ ರೂಪಾತೀತನೆಂದು ತಧ್ಯಾನಗೊಂಡಿತ್ತು, ಜ್ಞಾತೃ ಜ್ಞಾನ ಜ್ಞೇಯಕ್ಕೆ ಇನ್ನಾವ ಜ್ಞಾನವೊ ?....' ಎಂಬ ಮಾತುಗಳನ್ನು ಎತ್ತಿತೋರಿಸಿ ಪ್ರಮಾಣಗಳಿಗೆ ಅಸಾಧ್ಯವಾದ ಪರಬ್ರಹ್ಮಕ್ಕೆ ಪ್ರಮಾಣವಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ಅವರು ಅಪ್ರಮಾಣನು; ವಾಙ್ಮನಕ್ಕಗೋಚರ ನಿರ್ವಿಕಲ್ಪಿತ. ಈ ವಿಚಾರ ನೋಡಿದರೆ ಅನುಭಾವಿಗಳಿಗೆ ಅಥವಾ ವಚನಕಾರರಿಗೆ ಪ್ರಮಾಣಗಳ ಅವಶ್ಯಕತೆ ಕಂಡುಬರುವುದಿಲ್ಲ ಎಂಬುದು ಖಚಿತ.

ಮೇಲಿನ ವಿವರಣೆಯ ಪ್ರಕಾರ ಅವರು ಪ್ರಮಾಣ ಗಳನ್ನು ಅಂದರೆ ಪ್ರತ್ಯಕ್ಷ, ಅನುಮಾನ ಹಾಗೂ ಶಬ್ದಗಳನ್ನು ಬಳಸಿದ್ದು ತಿಳಿದು ಬರುವಂತೆ ಅವರಿಗೆ ಪ್ರಮಾಣಗಳ ಅವಶ್ಯಕತೆ ಇಲ್ಲವೆಂಬುದೂ ತಿಳಿದು ಬರುತ್ತದೆ. ಪ್ರಮಾಣಗಳ ಅಸ್ತಿತ್ವವು ಪ್ರಮೇಯಗಳ ಅಸ್ತಿತ್ವವನ್ನು ತಿಳಿಸುತ್ತದೆ. ಪ್ರತ್ಯಕ್ಷ, ಅನುಮಾನ ಮತ್ತು ಶಬ್ದಗಳ ಪ್ರಮೇಯ ಬಿನ್ನ ಬಿನ್ನ. ಅನುಭಾವ ಅಥವಾ ಆತ್ಮಸಾಕ್ಷಾತ್ಕಾರ ಎಂಬ ವಿಷಯ–ಪ್ರಮೇಯವು ಇಲ್ಲಿ ಉಲ್ಲೇಖಿಸಿದ ಪ್ರಮಾಣ ಪ್ರಮೇಯವಲ್ಲ. ಈ ಮಿತಿಗೊಳಪಟ್ಟು ಸೀಮಿತ ಅರ್ಥದಲ್ಲಿ ಮಾತ್ರ ಈ ಮೂರು ಪ್ರಮಾಣಗಳ ಬಳಕೆಯ ಅಥವಾ ಪ್ರಮೇಯದ ಕ್ಷೇತ್ರದ ನಿರ್ದಾರ ಮಾಡಲಾಗುತ್ತದೆ. ಈ ದೃಷ್ಟಿಯಿಂದ ಮೂರೂ ಪ್ರಮಾಣಗಳು ಅಪ್ರಯೋಜಕ. ಅನುಭಾವ ಪ್ರಮೆಯ ವಿಷಯದಲ್ಲಿ ಈ ಪ್ರಮೇಯಕ್ಕೆ ಕರಣವೇ ಇಲ್ಲವೆಂದು ಭಾವಿಸಬೇಕಾಗಿಲ್ಲ. ಅಲೌಕಿಕ ಪ್ರಮೇಯಕ್ಕೆ ಅಲೌಕಿಕ ಕರಣ ಅಥವಾ ಪ್ರಮಾಣ ಇದ್ದೇ ಇದೆ. ಈ ಮಾತನ್ನು ಉಪನಿಷತ್ಕಾರರು ನ್ಯಾಯಸೂತ್ರಕಾರರು ಹಾಗೂ ವಚನಕಾರರು ಸ್ಪಷ್ಟಪಡಿಸುತ್ತಾರೆ. ಕ–(ಅ) ಉಪನಿಷತ್ತು ಏನು ಹೇಳುತ್ತದೆಯೆಂಬುದನ್ನು ಇಲ್ಲಿ ತಿಳಿದುಕೊಳ್ಳುವ. ಕಠೋಪನಿಷತ್ತು ಹೀಗೆ ಹೇಳುತ್ತದೆ; ಅಧ್ಯಾತ್ಮಯೋಗಾಧಿಗಮೇನ, ದೇವಂ, ಮತ್ವಾ ಧೀರೋ ಹರ್ಷಶೋಕಾ–ಜಹಾತಿ। ಅಂದರೆ ಯೋಗವು ಪ್ರಮಾಣವು ಅದರ ಸಹಾಯದಿಂದ ದೇವಪ್ರಮಾಪ್ರಾಪ್ತಿಯಾಗುತ್ತದೆ ಎಂದು ಹೇಳುತ್ತದೆ. ನ್ಯಾಯ ಸೂತ್ರವೂ ಸಹ ಪ್ರಮಾಣಗಳಲ್ಲಿ

ಯೋಗವನ್ನು ಸೇರಿಸಿಕೊಂಡುದು ಕಂಡು ಬಂದುದನ್ನು ಮಹಾಮಹೋಪಾಧ್ಯಾಯ ಹರಪ್ರಸಾದಶಾಸ್ತ್ರಿ ಮತ್ತು ಗೋಪಿನಾಥ ಕವಿರಾಜರು ಎತ್ತಿ ತೋರಿಸಿ ನ್ಯಾಯಸೂತ್ರವು ಯೋಗವು ಪ್ರಮಾಣವೆಂದು ಒಪ್ಪಿಕೊಂಡುದನ್ನು ಸಿದ್ಧಪಡಿಸಿದ್ದಾರೆ. (ಬ) ಅದೇ ರೀತಿ ಪ್ರಮಾಣಾತೀತವಾದ ಪ್ರಮೇಯವಾದ ಪರಬ್ರಹ್ಮಕ್ಕೆ ಯೋಗವು ಪ್ರಮಾಕರಣವು ಎಂಬುನ್ನು ವಚನಕಾರರು ತಿಳಿಸುತ್ತಾರೆ. ಅನುಭಾವ, ಆಧ್ಯಾತ್ಮ ಯೋಗ, ಶಿವಯೋಗ ಎಂದು ಈ ಪ್ರಮಾಣ ಕರಣದ ಹೆಸರುಗಳು ಎಂಬುದು ವಚನಶಾಸ್ತ್ರವನ್ನು ಓದುವುದರಿಂದ ಗೋಚರವಾಗುತ್ತದೆ. ಷಡ್ದರ್ಶನಗಳೆಲ್ಲವೂ ಇದನ್ನು ಒಪ್ಪಿಕೊಳ್ಳುವಂತೆ ಬೌದ್ಧ ಹಾಗೂ ಜೈನ ಸಿದ್ಧಾಂತಗಳು ಆಗಮವು ಪ್ರಮಾಣ ಕರಣವೆಂದು ಒಪ್ಪಿಕೊಳ್ಳುವುದು ತಿಳಿದು ಬರುತ್ತದೆ.

ಈ ರೀತಿಯ ಪರಿಶೀಲನೆಯಿಂದ ವಚನಕಾರರು ಪ್ರಮಾಣಗಳನ್ನು ಬಳಸಿದ್ದು, ಅವು ಅವರಿಗೆ ಅವಶ್ಯವಾಗಿದ್ದುದು ಖಚಿತವಾಗುತ್ತದೆ.

## ವಚನಗಳಲ್ಲಿ ಪ್ರಮಾಣಗಳ ಉಲ್ಲೇಖವುಂಟೆ ?

ಅನುಭಾವಿಗಳಿಗೆ ಪ್ರಮಾಣ ಬಳಸುವ ಅವಶ್ಯಕತೆಯೇ ಇಲ್ಲ; ಅವರು ಪ್ರಮಾಣವಾದ ಪರಬಹ್ಮ ಜಿಜ್ಞಾಸುಗಳಾದುದರಿಂದ ಎಂಬುದು ಸಹಜವಾದ ನಿರ್ಣಯ ಇದು ಬೆಳಕಿನಷ್ಟು ಸ್ಪಷ್ಟ. ಅವರ ವಚನಗಳ ಸಮೀಕ್ಷೆ ಮಾಡಿದರೆ ಈ ಮಾತು ಎಷ್ಟರ ಮಟ್ಟಿಗೆ ವಾಸ್ತವವಾದುದು ಎಂಬುದು ಕಂಡುಬಾರದಿರದು ಸಾಮಾಜಿಕ ಅಸಮಾರ್ಪಕ ವಿಚಾರವನ್ನು ಖಂಡಿಸುವ ಪ್ರಸಂಗದಲ್ಲಿ. ಧಾರ್ಮಿಕ ಮೂಢನಂಬುಗೆಗಳನ್ನು ಹೊಡೆದು ಹಾಕುವಲ್ಲಿ; ಇಂದ್ರಿಯಗಳ ಅರ್ಥವನ್ನು ಆಧ್ಯಾತ್ಮಿಕ ಅರ್ಥಕ್ಕನುಗುಣವಾಗಿ ಬಳಸಿಕೊಳ್ಳುವಲ್ಲಿ ಅವರು ತಮ್ಮ ವಚನಗಳಲ್ಲಿ ಅನುಮಾನ, ಶಬ್ದ ಮತ್ತು ಪ್ರತ್ಯಕ್ಷಗಳನ್ನು ಬಳಸಿಕೊಂಡಿದ್ದಾರೆ, ಹಾಗೂ ಉಲ್ಲೇಖಿಸಿದ್ದಾರೆ. ಸಾಮಾಜಿಕ ದಾರ್ಶನಿಕರಾಗಿ ಅವರು ತೋರಿಸಿದ ಸಮಯಾಚಾರದ ಪ್ರಜ್ಞೆ, ವೈಚಾರಿಕ ಶೀಲತಾ ವೈಶಿಷ್ಟ್ಯಗಳು ಅನುಪಮವಾಗಿವೆ. ಅವರು ತಮ್ಮದೇ ಆದ ಕೆಲವು ದಾರ್ಶನಿಕ ಪದಗಳನ್ನು ಬಳಸಿದ್ದಾರೆ. ಹಳೆಯ ಪದಗಳಿಗೆ ಹೊಸ ಪದಗಳನ್ನು

ಕೊಟ್ಟಿದ್ದೂ ಉಂಟು. ಆದುದರಿಂದ ಅವರ ವಚನಗಳಲ್ಲಿ ಪದಾರ್ಥ ಇಲ್ಲವೆ ವಸ್ತುಸೈದ್ಧಾಂತಿಕ, ಹಾಗೂ ಪ್ರಮಾಣ ಇಲ್ಲವೆ ತರ್ಕಸೈದ್ಧಾಂತಿಕ ಪಾರಿಭಾಷಿಕ ಪದಗಳು ಕಂಡುಬರುತ್ತವೆ.

ಗುಬ್ಬಿಯ ಮಲ್ಲಣಾರ್ಯರ ಪಿತಾಮಹ ಗುಬ್ಬಿಯ ಮಲ್ಲಣ್ಣ ಅವರ ಕಾಲ ಕ್ರಿ. ಶ ಸುಮಾರ ೧೪೭೫ ಎಂದು ಒಪ್ಪಿಕೊಳ್ಳಲಾಗಿದೆ. ಮಲ್ಲಣ್ಣ ಅವರು 'ಗಣಭಾಷಿತ ರತ್ನಮಾಲೆ' ಮತ್ತು 'ವಾತುಲಾಗಮ ವ್ಯಾಖ್ಯಾನ' ಎಂಬ ಎರಡು ಶ್ರೇಷ್ಠ ಶಾಸ್ತ್ರಗ್ರಂಥಗಳನ್ನು ರಚಿಸಿದವರು. ಅವರಿಗೆ ವಚನಾಗಮ ಮತ್ತು ಶೈವಾಗಮಗಳೆರಡರಲ್ಲೂ ಪ್ರಭುತ್ವವಿದ್ದುದನ್ನು ತೋರಿಸುವ ಕೃತಿಗಳಾಗಿವೆ. ಇವು ಆದರೆ ಅವರು ವಚನಾಗಮಗಳಲ್ಲಿ ಉಲ್ಲೇಖಗೊಂಡ ಪ್ರಮಾಣಗಳನ್ನು ತಿಳಿಸಿಲ್ಲ. ಆದರೆ ಆಗಮಗಳನ್ನು–ಪಾರಮೇಶ್ವರ ತಂತ್ರ ಮತ್ತು ಪೌಷ್ಕರ ಪ್ರಮಾಣಗಳನ್ನು–ಆದಾರವಾಗಿಟ್ಟುಕೊಂಡು ಪ್ರಮಾಣಗಳನ್ನು ಉಲ್ಲೇಖಿಸಿರುವುದು ಮಲ್ಲಣ್ಣನವರಲ್ಲಿ ಕಂಡುಬರುತ್ತದೆ. ಆಗಮ ಸಂಪ್ರದಾಯಕ್ಕನುಸರಿಸಿ ಪ್ರತ್ಯಕ್ಷ, ಅನುಮಾನ, ಶಬ್ದ ಮತ್ತು ಅರ್ಥಾಪತ್ತಿ ಎಂದು ನಾಲ್ಕು ಪ್ರಮಾಣಗಳನ್ನು ಉಲ್ಲೇಖಿಸುತ್ತಾರೆ ಹಾಗೂ ಲಕ್ಷಣಿಸುತ್ತಾರೆ. "ವಾತುಲಾಗಮದ ವ್ಯಾಖ್ಯಾನ ಮುಖದಲ್ಲಿ ಪಾರಮೇಶ್ವರ ಮತ್ತು ಪೌಷ್ಕರಾಗಮವನ್ನು ಆಧರಿಸಿ ವೀರಶೈವಕ್ಕೆ ಅನ್ವಯವಾಗುವ ಪ್ರಮಾಣಗಳನ್ನು ಮಲ್ಲಣಾರ್ಯರು ವಿವರಿಸಿರುವರು" ಎಂದು ಷಟ್‌ಸ್ಥಲ ಜ್ಞಾನಸಾರಾಮೃತ ಗ್ರಂಥ ಸಂಪಾದಕೀಯದಲ್ಲಿ ಬರೆದದ್ದನ್ನು ನಾವಿಲ್ಲಿ ಸುಮ್ಮನೆ ಒಪ್ಪಿಕೊಂಡು ಬಿಡುವುದು ಉಚಿತವಾಗಿದೆ. ಆದರೆ ಮಲ್ಲಣಾರ್ಯರು ಯಾವ ವೀರಶೈವ ಸಿದ್ಧಾಂತಕ್ಕೆ ಅನುಗುಣವಾಗಿ ಪ್ರಮಾಣಗಳನ್ನು ವಿಚಾರಿಸಿದ್ದಾರೆಯೊ, ಆ ನಾಲ್ಕು ಪ್ರಮಾಣಗಳು ಆಗಮಾಧಾರಿತ ವಾಗಿರುವುದರಿಂದ ಎಲ್ಲ ಶೈವ ಪ್ರಭೇದಗಳಿಗೂ ಅನ್ವಯಿಸುತ್ತವೆಯೋ ಎಂಬ ಪರಿಶೀಲನೆ ಅವಶ್ಯವಿದ್ದರೂ ಪ್ರಸ್ತುತದಲ್ಲಿ ಆ ಕಾರ್ಯವನ್ನು ಕೈಕೊಳ್ಳದೆ ಸಮಯಕ್ಕನುಸರಿಸಿ ಪರಿಶೀಲನೆಯನ್ನು ಮಾಡಲಾಗುವದು. ಅದು ದಾರ್ಶನಿಕ ದೃಷ್ಟಿಯಿಂದ ಅವಶ್ಯದ ಕಾರ್ಯವಾಗಿದೆ. ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ವಚನಶಾಸ್ತ್ರವನ್ನು ಪ್ರಮಾಣಗಳ ದೃಷ್ಟಿಯಿಂದ ಪರಿಶೀಲಿಸುತ್ತಿರುವಾಗ ಸುಪ್ರಸಿದ್ಧ ಹಿರಿಯ ವಚನಕಾರರ ವಚನಗಳಲ್ಲಿ ಪ್ರಮಾಣಗಳ ಉಲ್ಲೇಖವನ್ನು ಮಾಡಿದ್ದಾರೆ. ಘಟ್ಟಿವಾಳಯ್ಯಗಳು ತಮ್ಮ ಒಂದು ವಚನದಲ್ಲಿ ಹೀಗೆ ಹೇಳುತ್ತಾರೆ.೮

ಲೀಲೆಗೆ ಹೊರಗಾದ ಲಿಂಗವೆ, ಬಾರಯ್ಯ ಎನ್ನಂಗದೊಳಗಾಗು.
ಶ್ರುತ ದೃಷ್ಟ ಅನುಮಾನದಲ್ಲಿ ನೋಡುವರಿಗೆಲ್ಲಕ್ಕು ಅತೀತವಾಗು.
ಆಗೆಂಬುದಕ್ಕೆ ಮುನ್ನವೆ ಆ ಗುಂಡು ಕಾಯದ ಕರಸ್ಥಲದಲ್ಲಿ
ನಿರ್ಭಾವವಾಗಿ, ಕಾಯವಡಗಿ, ಭಾವವೆಂಬ ಭಾವ ಬಯಲಾಯಿತ್ತು
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲಾ.ಎಂಬುದಕ್ಕೆ ಮುನ್ನವೆ.

ಈ ವಚನದಲ್ಲಿ ಬರುವ ಶ್ರುತ, ದೃಷ್ಟ ಮತ್ತು ಅನುಮಾನ ಎಂಬ ಪದಗಳು ಪ್ರಮಾಣ ಶಾಸ್ತ್ರಕ್ಕೆ ಸೇರಿದ ಪಾರಿಭಾಷಿಕ ಪದಗಳು. ಇವರು ಆಗಮಗಳ ಆಧಾರದಿಂದ ಹೇಳಿಲ್ಲ ಮತ್ತು ಲಕ್ಷಣಿಸಿಲ್ಲ. ಅದೇ ರೀತಿ ಗುಬ್ಬಿಯ ಮಲ್ಲಣಾರ್ಯರು ತಿಳಿಸುವಂತೆ ಮತ್ತು ಷಟ್‌ಸ್ಥಲ ಜ್ಞಾನಸಾರಾಮೃತದ ಸಂಪಾದಕರು ಭಾವಿಸಿದಂತೆ "ಈ ಸಿದ್ಧಾಂತದಲ್ಲಿ ಶಬ್ದ ಪ್ರಮಾಣವೇ ಮುಖ್ಯವೆಂಬ ಮಾತು ಸ್ಪಷ್ಟವಾಗುತ್ತದೆ." ಎಂಬುದು ಮೇಲಿನ ವಚನದಿಂದ ಸಿದ್ಧವಾಗುವುದಿಲ್ಲ. ಯಾಕೆಂದರೆ ಲಿಂಗಕ್ಕೆ ಘಟ್ಟಿವಾಳಯ್ಯಗಳು ಹೇಳುವ ರೀತಿಯನ್ನು ನೋಡಿದರೆ ಶ್ರುತ, ದೃಷ್ಟ ಮತ್ತು ಅನುಮಾನಕ್ಕೆ 'ಅತೀತವಾಗು' ಎಂಬ ಪದವು ದೃಷ್ಟ ಮತ್ತು ಅನುಮಾನಗಳಂತೆಯೇ ಶಬ್ದವು ಲಿಂಗಪ್ರಮಾಕರಣವಲ್ಲ ಎಂದು ಸಿದ್ಧವಾಗುತ್ತದೆ. ಲಿಂಗವು–ಪರಬ್ರಹ್ಮವು-ಅಪ್ರಮಾಣವೆಂಬುದು ಇದರಿಂದ ಸಿದ್ಧವಾಗುತ್ತದೆ. ಆದರೆ ವಚನಕಾರರು ಶಬ್ದಪ್ರಮಾಣವನ್ನು ಕುರಿತು ಹೇಳದಿಲ್ಲ.ಅವರು ಶಬ್ದಪ್ರಮಾಣವನ್ನು ಹೇಗೆ ಲಕ್ಷಣಿಸಿದರು ಎಂಬುದು ವಿಚಾರಾರ್ಹ ಹಾಗೂ ತೌಲನಿಕ ಅಧ್ಯಯನಾರ್ಹ. ಆಗ ನಮಗೆ ಯಾವ ರೀತಿಯಿಂದ ವಚನಕಾರರ ಶಬ್ದವು ಭಿನ್ನವಾಗಿದೆ ಎಂಬುದು ತಿಳಿದು ಬರುತ್ತದೆ. ಘಟ್ಟಿವಾಳಯ್ಯಗಳು ಉಲ್ಲೇಖಿಸಿದ ಶ್ರುತ, ದೃಷ್ಟ ಮತ್ತು ಅನುಮಾನಗಳು ವಚನಕಾರನು ಒಬ್ಬನು ಇವುಗಳನ್ನು ಎಲ್ಲ ಪ್ರಮಾಣಗಳಿಂದ ಆಯ್ಕೆ ಮಾಡಿದಂತಿವೆ. ಈ ಆಯ್ಕೆಯು ಅವುಗಳು ಪ್ರಮಾಣಶಾಸ್ತ್ರದಲ್ಲಿ ಮುಖ್ಯವಾದವು

ಗಳೆಂದು ಎತ್ತಿ ತೋರಿಸುತ್ತದೆ. ಇದರಿಂದ ವಚನಕಾರನಿಗೆ ಈ ಮೂರು ಪ್ರಮಾಣಗಳು ಒಪ್ಪಿತವಾಗಿವೆ ಎಂದು ಕಂಡು ಬರುತ್ತದೆ. ಬಸವಣ್ಣನವರು ಒಂದು ವಚನದಲ್ಲಿ[೯] ಶಬ್ದ (ಅಂದರೆ ವೇದಶಾಸ್ತ್ರ ಆಗಮ) ತರ್ಕದ ಉಲ್ಲೇಖ ಮಾಡುತ್ತಾರೆ ಮತ್ತೊಂದು ವಚನದಲ್ಲಿ[೧೦] ಪಂಚೇಂದ್ರಿಯಗಳನ್ನು ಉಲ್ಲೇಖಿಸುತ್ತಾರೆ. ಅಲ್ಲಮ ಪ್ರಭುಗಳು ತಮ್ಮ ವಚನಗಳಲ್ಲಿ ಆಪ್ತವಾಕ್ಯವನ್ನು,[೧೧] ಪಂಚೇಂದ್ರಿಯ[೧೨]ಗಳನ್ನು ಉಲ್ಲೇಖಿಸುತ್ತಾರೆ. ತರ್ಕವನ್ನು ಬಳಸಿಕೊಳ್ಳುತ್ತಾರೆ. ಚನ್ನಬಸವಣ್ಣನವರು ದೃಷ್ಟ, ಅದೃಷ್ಟ, ಆಗಮ ಎಂಬ ಪದಗಳನ್ನು ಬಳಸುವರಲ್ಲದೆ ಷಡ್ವಿಧ ಜ್ಞಾನವನ್ನೂ ಹೇಳುವರು. ಪ್ರಮಾಣಶಾಸ್ತ್ರದ ಪ್ರಮಾ :ಜ್ಞಾನದ ಎರಡು ರೂಪಗಳನ್ನೂ ಚನ್ನಬಸವಣ್ಣನವರು ಚಿತ್ರಿಸುತ್ತಾರೆ : ಒಂದು ತಾರ್ಕಿಕ[೧೩] ಮತ್ತೊಂದು ಮನೋವೈಜ್ಞಾನಿಕ ಹೀಗೆ ಶಿವಶರಣರ ವಚನಗಳಲ್ಲಿ ಬರುವ ಶ್ರುತ, ದೃಷ್ಟ ಮತ್ತು ಅನುಮಾನ ಎಂಬ ಮುಖ್ಯ ಪ್ರಮಾಣಗಳಿದ್ದು ಇವುಗಳಂತೆ ಇಂದ್ರಿಯಲಿಖಿತ, ಲಿಂಗಲಿಖಿತ ಶಬ್ದ ಮತ್ತು ನಿಶ್ಶಬ್ದ ಹಾಗೂ ರೂಪಕಗಳ, ಸಾದೃಶವಾದ ಪ್ರಯೋಗಗಳು ವಚನಗಳಲ್ಲಿ ಕಂಡು ಬರುತ್ತವೆ. ಇವೆಲ್ಲವುಗಳು ಮೇಲಿನ ಮೂರು ಪ್ರಮಾಣಗಳಲ್ಲಿ ಹೇಗೆ ಅಂತರ್ಗತವಾಗುತ್ತವೆ ಎಂಬುದು ಮಹತ್ವದ ವಿಚಾರವಾಗಿದೆ. ಈ ವಿಚಾರವನ್ನು ಮುಂದಿನ ಲೇಖಾಂಕದಲ್ಲಿ ಪರಿಶೀಲಿಸಲಾಗುತ್ತದೆ.

## ಅಡಿ ಟಿಪ್ಪಣಿ

೧) ಕಠೋಪನಿಷತ್ತು ೧.೨.೭.೮; ೧.೨.೨೩

೨) ಡಾ. ಡಿ. ಎನ್ ಶಾಸ್ತ್ರಿ: The philosophy of Nyaya–Visesika and its Conflict with the Budhist Dingnaga School, page 42 ಭಾರತೀಯ ವಿದ್ಯಾಪ್ರಕಾಶನ, ದೆಹಲಿ ೧೯೭೭

೩) ಡಾ. ಶ್ರೀಕಂಠಶಾಸ್ತ್ರಿ : 'ಭಾರತೀಯ ಸಂಸ್ಕೃತಿ'

೪) ಕೆರೆಯ ಪದ್ಮಣಾಂಕ 'ಪದ್ಮರಾಜ ಪುರಾಣ,' ಸಂ. ೧, ವ. ೧೧, ೧೨. ಅದೇ ಪು-3 ಮುರುಘಾಮಠ, ಧಾರವಾಡ,(೧೯೬೮)

೫) ಸತೀಶ್ ಚಂದ್ರ ವಿದ್ಯಾಭೂಷಣ : A History of Indian Logic

೬) ಡಾ. ಆರ್. ಸಿ. ಹಿರೇಮಠ ಷಟಸ್ಥಲ ಜ್ಞಾನಸಾರಾಮೃತ,' ಪು. ೧೨೦, ಮುರುಘಾಮಠ, ಧಾರವಾಡ (೧೯೬೪)

೭) 'ಕಠೋಪನಿಷತ್ತು' ೧,೨.೧೨

೮) ಡಾ. ಪಿ. ಜಿ. ಹಳಕಟ್ಟಿ 'ಶೂನ್ಯಸಂಪಾದನೆ; ಸಂ ೧೫, ವಚನ ೪೯ ವಿಜಾಪುರ (೧೯೩೦)

೯) ಪ್ರೊ. ಎಸ್. ಎಸ್. ಬಸವನಾಳ 'ಬಸವಣ್ಣನವರ ವಚನಗಳು,' ಎಲ್. ಇ. ಅಸೋಸಿಯೇಷನ್, ಧಾರವಾಡ (೧೯೬೨)

೧೦) ಪ್ರೊ. ಎಸ್. ಎಸ್. ಬಸವನಾಳ ಅದೇ, ವಚನ ೭೯೬-೭೮೯

೧೧) ಡಾ. ಎಲ್. ಬಸವರಾಜು : 'ಅಲ್ಲಮನ ವಚನಚಂದ್ರಿಕೆ,' ೭೯, ೮೮ ನಳಿನೀ ಶಂಕರ ಪ್ರಕಾಶನ. ಮೈಸೂರು(೧೯೬೧)

೧೨) ಡಾ. ಎಲ್. ಬಸವರಾಜು : ಅದೇ ವಚನ ೬೮, ೧೫೨, ೨೬೯

೧೩) ಡಾ. ಆರ್. ಸಿ. ಹಿರೇಮಠ : 'ಚೆನ್ನಬಸವಣ್ಣನವರ ವಚನಗಳು', ವ. ೧೧೫೦, ೧೨೪೨, ೧೩೧೪, ೧೩೪೦, ಕ. ವಿ. ವಿ. ಧಾರವಾಡ (೧೯೬೫)

## 'ಸಂಪಾದನೆ' ಮತ್ತು 'ಪ್ರಸಂಗ' ಪದಗಳ ಪರಿಚಯ

ಜಗತ್ತಿನ ಆಧ್ಯಾತ್ಮಿಕ ಸಾಹಿತ್ಯದಲ್ಲಿಯ ಕೆಲವು ಸುಪ್ರಸಿದ್ಧ ಗ್ರಂಥಗಳನ್ನು ನೋಡಿದರೆ ಅವುಗಳೆಲ್ಲ ಕಥಾರೂಪದವಾಗಿವೆ. ಅವುಗಳಲ್ಲಿಯ ಒಂದೆರಡನ್ನು ಹೆಸರಿಸಬೇಕೆಂದರೆ—ಬೃಹದಾರಣ್ಯಕ, ಛಾಂದೋಗ್ಯ, ಕಠ, ಪ್ರಶ್ನೆಗಳೆಂಬ ಉಪನಿಷತ್ತುಗಳು; ಗ್ರೀಕ ತತ್ತ್ವಜ್ಞಾನಿ ಪ್ಲೇಟೋನ ಡೈಲಾಗ್ಸ, ಮಿಳಿಂದ ಪನ್ಹಾ, ಭಗವದ್ಗೀತೆ, ಡೈಕಾರ್ಟನ ಮೆಥೆಡ್, ಶೂನ್ಯಸಂಪಾದನೆ, ಮೊದಲಾದ ವುಗಳು. ಆಧ್ಯಾತ್ಮಿಕ ವಿಚಾರದ ಈ ಗ್ರಂಥಗಳಲ್ಲಿ ಪೌರಾಣಿಕ ಪುರುಷ ಮತ್ತು ಸ್ತ್ರೀಯರು ಕಥಾ ನಡಿಸಿಕೊಟ್ಟಿರಬಹುದು; ಕೇವಲ ಕಾಲ್ಪನಿಕ ವ್ಯಕ್ತಿಗಳ ನಡುವೆ ಕಥಾ ನಡೆದಿರಬಹುದು; ಸಮಕಾಲೀನ ಐತಿಹಾಸಿಕ ವ್ಯಕ್ತಿಗಳದು ಕಥಾ ಆಗಿರಬಹುದು; ಇಲ್ಲವೆ ಸಮಕಾಲೀನರು ನಡೆಸಿದ ಕಥಾದಲ್ಲಿ ಪ್ರಾಚೀನರು ಸೇರಿಕೊಂಡಿರಬಹುದು. ಈ ವಿವರಣೆಯು ಕಥಾನಡಿಸಿದ ವ್ಯಕ್ತಿಗಳು ನಾಲ್ಕು ಬಗೆಯುವರೆಂಬುದನ್ನು ತಿಳಿಸುತ್ತದೆ. ಶೂನ್ಯಸಂಪಾದನೆಯು ಸಂಪಾದನಾದಲ್ಲಿ ಇಂಥ ವ್ಯಕ್ತಿಗಳು ಭಾಗವಹಿಸಿದ್ದಾರೆ.

ಕಥಾ ವಿಚಾರದಲ್ಲಿ ಭಾರತೀಯ ಆನ್ವೀಕ್ಷಿಕೀ ಪರಿಣತರು ಭಿನ್ನ ಭಿನ್ನ ಅಭಿಪ್ರಾಯಗಳುಳ್ಳವರಾಗಿದ್ದಾರೆ. ನ್ಯಾಯಸೂತ್ರದ ಕರ್ತೃ ಗೌತಮ ಮುನಿಯ ನ್ಯಾಯಸೂತ್ರದಲ್ಲಿಯ ಪ್ರಥಮ ಪ್ರಕರಣದ ದ್ವಿತಿಯಭಾಗದಲ್ಲಿ ಕಥಾ ವಿಚಾರವಿದೆ. ಅಲ್ಲಿ ಅವನು ಕಥಾವು ವಾದ, ಜಲ್ಪ, ಮತ್ತು ವಿತಂಡಾ ಎಂದು ಮೂರು ಪ್ರಕಾರದ್ದೆಂದು ಹೇಳುವನು. ಜೈನ ದಾರ್ಶನಿಕನಾದ ಹೇಮಚಂದ್ರನ ಪ್ರಕಾರ ಕಥಾ ಎಂಬುದು ಮೂರು ಪ್ರಕಾರದ್ದಿಲ್ಲ. ಅದು ವಾದವೆಂಬ ಒಂದೇ ಒಂದು ಪ್ರಕಾರವಾಗಿದೆ. ಇವನು ಜಲ್ಪ ಮತ್ತು ವಿತಂಡಾ

ಗಳನ್ನು ಕೈಬಿಟ್ಟಿದ್ದಾನೆ. ವಾದಿದೇವಸೂರಿ ಎಂಬುವವನು ಕಥಾ ಎಂಬುದು ವಾದವು ವಿಜಯು ಇಲ್ಲವೆ ಜ್ಞಾನಪ್ರತಿಪಾದನೆಯ ಗುರಿಯುಳ್ಳುದೆಂದು ಹೇಳು ವನು. ಬೌದ್ಧ ತತ್ತ್ವಜ್ಞಾನಿ ವಸುಬಂಧು ಸಹ ಕಥಾ ಎಂಬುದು ವಾದ ವೆಂಬ ಒಂದೇ ಒಂದು ಪ್ರಕಾರವಾಗಿದೆಯೆನ್ನುವನು. ಇವನ ಪ್ರಕಾರ ಪ್ರಮಾ ಸಿದ್ಧಿ ಅಥವಾ ಪದಾರ್ಥಸಿದ್ಧಿ ಕಥಾದ ಕಾರಣ. ಉಳಿದ ದಾರ್ಶನಿಕರು ಗೌತಮ ಮುನಿಯ ವಿಚಾರವನ್ನೇ ಅನುಸರಿಸುವರು. ಆಸ್ತಿಕ ಮತ್ತು ನಾಸ್ತಿಕ ದಾರ್ಶನಿಕರು ಕಥಾದ ವಿಚಾರದಲ್ಲಿ ಎರಡು ನಿಲವುಗಳುಳ್ಳವರಾಗಿದ್ದಾರೆಂದು ಇಲ್ಲಿ ಗೊತ್ತಾಗುತ್ತದೆ.

ಹನ್ನೆರಡನೆಯ ಶತಮಾನದ ಭಾರತೀಯರಲ್ಲಿ ದಾರ್ಶನಿಕ ಚಟುವಟಿಕೆ ಗಳು ಎಂದಿಗಿಂತಲೂ ತೀವ್ರವಾಗಿರದಿದ್ದರೂ, ಪೂರ್ವದ ಒಂದೆರಡು ಶತಮಾನಗಳಲ್ಲಿ ಈ ಚಟುವಟಿಕೆಗಳು ಹೊಸ ಸ್ವರೂಪವನ್ನು ತಾಳುವ ಸೂಚನೆಗಳಿಂದ ತುಂಬಿಕೊಂಡಿದ್ದವೆಂದು ವಿದ್ವಾಂಸರ ಅಭಿಪ್ರಾಯಂ. ಈ ಹೊಸದರ ಅಭಿವ್ಯಕ್ತಿ ೧೨ನೆಯ ಶತಮಾನದ ಶಿವಶರಣರಲ್ಲಿ ಆಗತೊಡಗಿತ್ತು. ಇವರು ಪ್ರಮಾಣಶಾಸ್ತ್ರ ಪರಿಣತರಾಗಿದ್ದರು. ಕಥಾದಲ್ಲಿ ಪಾರಂಪರಿಕವಾಗಿ ಪ್ರಯೋಗಗೊಳ್ಳುತ್ತಿದ್ದ ಪ್ರಮಾಣಗಳ ಕ್ರಮಯುಕ್ತ ಬಳಕೆಯನ್ನು ಬಸವಣ್ಣ ನವರು[೩] "ಈಶ್ವರ ಸದ್ಭಾವೇ ಕಿಂ ಪ್ರಮಾಣಂ ?" ಎಂಬ ಮೀಮಾಂಸಕನ" ಎಂಬ ವಚನದಲ್ಲಿ ಮಾಡಿದ್ದು ಒಂದು ನಿದರ್ಶನ. ಅದೇ ಪ್ರಕಾರ ಅವರು ಕಥಾವಿಧಾನದ ಪ್ರಕಾರಗಳನ್ನು ಬಳಸಿರುವುದನ್ನೂ ಗುರುತಿಸಬಹುದು. ಇದು ಅತ್ಯಂತ ಪ್ರಾಚೀನಕಾಲದಿಂದಲೂ ಬಳಕೆಯಲ್ಲಿದ್ದುದನ್ನು ವಿಜ್ಞಾನಿಗಳು ಲಕ್ಷಣಿ ಸಿದ್ದಾರೆ. ಗೌತಮ ಮುನಿಯು ಇದರ ಗುರಿಯನ್ನು ಗುರುತಿಸಿದ್ದು–ವಿಜ್ಞಾನಿ ಗಳು ತತ್ತ್ವನಿರ್ಣಯಕ್ಕಾಗಿ ಇದನ್ನು ಬಳಸುವರೆಂದು ಹೇಳವನು. ಇದರಲ್ಲಿ ಪ್ರಮಾಣಗಳ ಉಪಯೋಗ ಮಾಡಲಾಗುತ್ತದೆಯೆನ್ನುವನು. ಭಗದ್ಗೀತೆ ಯಲ್ಲಿ ಅರ್ಜುನನು ಅನೇಕ ಶಂಕೆಗಳನ್ನು ಎತ್ತುವದರಿಂದ ಕಥಾ ಪ್ರಾರಂಭ. ಇಲ್ಲಿ ಕಥಾ (ಸಂಪಾದನಾ) ಇಬ್ಬರ ನಡುವೆ ನಡೆದಿದೆ. ಉಪನಿಷತ್ತುಗಳಲ್ಲಿ ಇಬ್ಬರೋ, ಮೂವರೋ ಕಥಾದಲ್ಲಿ ಭಾಗವಹಿಸುತ್ತಾರೆ. ಶೂನ್ಯ ಸಂಪಾದ ನೆಯ ಸಂಪಾದನೆಗಳಲ್ಲಿ ಕೂಡ ಒಬ್ಬರು, ಇಬ್ಬರು, ಅಥವ ಹಲವರಿಂದ

ಸಂಪಾದನೆ ನಡೆಯುತ್ತದೆ. ಶಿವಶರಣರು ತಮ್ಮದೇ ಆದಂಥ ಒಂದು ಪ್ರಯೋಗವನ್ನು ಈ ಶಾಸ್ತ್ರದಲ್ಲಿ ಮಾಡಿದ ಉದಾಹರಣೆ ಸಿಗುತ್ತದೆ. ಪುರಾತನ ವಿಜ್ಞಾನಿಗಳ ಪ್ರಕಾರ ಕಥಾದಲ್ಲಿ ಅತ್ಯಂತ ಕಡಿಮೆ ಎಂದರೆ ಇಬ್ಬರಾದರೂ ಭಾಗವಹಿಸಬೇಕಾಗುತ್ತದೆ. ಅಲ್ಲಮ ಪ್ರಭುಗಳು ಈ ಸಂಪ್ರದಾಯವನ್ನು ಉಲ್ಲಂಘಿಸಿ ಹೊಸ ಉಪಕ್ರಮವನ್ನು ಪ್ರಾರಂಭಿಸಿದರು. ಶೂನ್ಯಸಂಪಾದನೆಯ ಪ್ರಥಮೋಪದೇಶದಲ್ಲಿ ಇದನ್ನು ನೋಡಬಹುದು.

ಗೌತಮ ಮುನಿಯು ಕಥಾ ಪದವನ್ನು ಪ್ರಯೋಗಿಸಿದ್ದು ಅದರ ವಿವರಣೆಯನ್ನು ವಾತ್ಸಾಯನನೆಂಬ ಭಾಷ್ಯಕಾರ ಕೊಟ್ಟಿದ್ದಾನೆ. ಅವನು ಹೇಳಿದ್ದು ಹೀಗಿದೆ : Though there are various meanings of the word Katha. it is used in the technical sense of debate. ಈ ಅರ್ಥವನ್ನು ಗೌತಮನೇ ಸ್ವತಃ ನ್ಯಾಯಸೂತ್ರ ೫-೨-೧೯; ೫-೨-೨೩ ರಲ್ಲಿ ಚರ್ಚೆ ಅಥವ ಸಂಪಾದನೆ ಎಂಬರ್ಥದಲ್ಲಿ ಬಳಸಿದ್ದಾನೆ. ವಾಚಸ್ಪತಿ ಮಿಶ್ರ ಮತ್ತು ವರದರಾಜರ ಪ್ರಕಾರ : debate consists in the statements and counter statements on the part of more than one contestants relating to a central theme.

ಅ. 'ವಾದ'ವೆಂಬುದು ಪ್ರಮಾಣ-ತರ್ಕ-ಸಾಧನ-ಉಪಾಲಂಬ ಅಂದರೆ ಪ್ರಮಾಣ ಹಾಗೂ ತರ್ಕಗಳ ಸಹಾಯದಿಂದ ವಾದಿ ಮತ್ತು ಪ್ರತಿವಾದಿ (paksa, pratipaksa)ಗಳು ಸಮರ್ಥಿಸಿಕೊಳ್ಳುವದು. ಸಮರ್ಥನೆಯು ಪ್ರಮಾಣ ಹಾಗೂ ತರ್ಕಗಳ ಸಹಾಯದಿಂದ ನಡೆಯುವಂತೆ, ಅದರ ನಿರಾಕರಣೆಯೂ ಕೂಡ ಪ್ರಮಾಣ ಮತ್ತು ತರ್ಕಗಳ ಸಹಾಯದಿಂದಲೇ ನಡೆಯುತ್ತದೆ. ಪ್ರಮಾಣವೆಂದರೆ ಶಬ್ದ, ಪ್ರತ್ಯಕ್ಷ, ಮುಂತಾದವುಗಳು, ತರ್ಕ ವೆಂದರೆ ಗೊತ್ತಿದ್ದ ವಿಷಯದಿಂದ ಗೊತ್ತಿಲ್ಲದ ವಿಷಯವನ್ನು ಅವೆರಡರುಗಳ ಸಮಾನವಾದ ಅಥವಾ ಸಾಧಾರಣವಾದ ಚಿಹ್ನೆ(ಲಿಂಗ)ಯಿಂದ ಅರಿತುಕೊಳ್ಳು ವುದು ಸಾಧನವೆಂದರೆ ವಿಷಯದ ಸಮರ್ಥನೆ. ಉಪಾಲಂಬ ಅಂದರೆ ವಾದಿಯ ವಿಷಯದ ನಿರಾಕರಣೆ. ನ್ಯಾಯಸೂತ್ರದಲ್ಲಿ ಪ್ರಮಾಣ ಮತ್ತು ತರ್ಕಗಳನ್ನು ಪ್ರತ್ಯೇಕವಾಗಿ ಹೆಸರಿಸುವುದಕ್ಕೆ ಕಾರಣವೆಂದರೆ ಅವೆರಡರ ಬಳಕೆಯು ಪಕ್ಷ

ಪ್ರತಿಪಕ್ಷದವರಿಬ್ಬರಿಗೆಯೂ ಬೇಕು ಎಂಬುದನ್ನು ಸೂಚಿಸಲು ಇವೆರಡನ್ನು ಸಮರ್ಥನೆಗಾಗಿ ನಿರಾಕರಣಕ್ಕಾಗಿ ಬಳಸಬೇಕೆಂಬುದು ಈ ರೀತಿಯ ಪ್ರಯೋಗದ ಉದ್ದೇಶ. ಈ ಎಲ್ಲ ಮಾತುಗಳು ವಾದದ ಲಕ್ಷಣಗಳಾಗಿವೆ. ಇವು ವಾದವನ್ನು ಜಲ್ಪ ಮತ್ತು ವಿತಂಡದಿಂದ ಬೇರ್ಪಡಿಸುತ್ತವೆ.

ಬ. 'ಜಲ್ಪ' ಎಂಬುದು ಕಥಾದ ಇನ್ನೊಂದು ಪ್ರಕಾರ. ಸಮರ್ಥನೆಯನ್ನು ಹಾಗೂ ನಿರಾಕರಣೆಯನ್ನು ಛಲ, ಜಾತಿ, ಮತ್ತು ನಿಗ್ರಹಸ್ಥಾನಗಳ ಉಪಯೋಗದಿಂದ ಮಾಡುವ ವಾದವೇ ಜಲ್ಪವೆಂದು ಸೂತ್ರಕಾರನ ಹಾಗೂ ಭಾಷ್ಯಕಾರರ ಅಭಿಪ್ರಾಯ. ಛಲವೆಂದರೆ ಶ್ಲೇಷಾರ್ಥದ ಪದಪ್ರಯೋಗ ಮಾಡುವುದು. ಜಾತಿಯೆಂದರೆ ನಿಷ್ಪ್ರಯೋಜಕವಿರುವ ಮಾತುಗಳನ್ನು ಬಳಸುವುದು. ನಿಗ್ರಹಸ್ಥಾನವೆಂದರೆ ಪಕ್ಷ ಪ್ರತಿಪಕ್ಷದವರು ಒಬ್ಬರೊಬ್ಬರಲ್ಲಿಯ ದೋಷಗಳನ್ನು ಎತ್ತಿ ಆಡುವುದು. ಈ ಮೂರನ್ನು ಬಳಸಿ ಕಥಾದಲ್ಲಿ ಜಯಗಳಿಸುವದು ಜಲ್ಪ. ಜಲ್ಪವು ವಿಷಯ ಸಿದ್ಧಿಯ ಗುರಿಯುಳ್ಳುದಲ್ಲ. ಛಲ,ಜಾತಿ ಹಾಗೂ ನಿಗ್ರಹಸ್ಥಾನಗಳು ವಿಧ್ವಂಸಾತ್ಮಕವಾಗಿರುತ್ತವೆ. ಪಕ್ಷ ಪ್ರತಿಪಕ್ಷದವರು ಒಬ್ಬರಬಾಯನ್ನು ಇನ್ನೊಬ್ಬರು ಮುಚ್ಚಿಸಲು ಜಲ್ಪವನ್ನು ಬಳಸುವರೆಂದು ಉದ್ಯೋತಕರನೆಂಬ ವಿದ್ವಾಂಸನ ಅಭಿಪ್ರಾಯ. ಆದರೆ ವಾತ್ಸ್ಯಾಯನನು ಜಲ್ಪವು ಕೊನೆಗೆ ಸಿದ್ಧಾಂತ ಪ್ರತಿಷ್ಠಾಪನೆಗೆ ಉಪಯುಕ್ತವಾಗುತ್ತದೆಯೆನ್ನುವನು.

ಕ. **ವಿತಂಡಾ** ಎಂಬುದು ಕಥಾ (ಸಂಪಾದನೆಯ)ದ ಮೂರನೆಯ ಪ್ರಕಾರ. ಗೌತಮ ಮುನಿಯು "ಎದುರಾಳಿಯನ್ನು ವಿರೋಧಿಸುವ ಜಲ್ಪವೇ **ವಿತಂಡಾ**" ಎನ್ನುವನು. [ಸಪ್ರತಿಪಕ್ಷಸ್ಥಾಪನಾ ಹೀನೋ 'ವಿತಂಡಾ'] ೧-೨-೩

ವಿತಂಡಾ ಬಳಸುವವನು ವಿಷಯ ಪ್ರತಿಪಾದನೆಯನ್ನು ಗಣನೆಗೆ ತೆಗೆದುಕೊಳ್ಳುವದಿಲ್ಲ ಕ್ಷುದ್ರ ಟೀಕೆ ಅಥವ ಖಂಡನೆ ಆತನ ಗುರಿ.

**ಶಿವಶರಣರು** ಬಳಸಿದ **ಸಂಪಾದನಾ**(ನೆ) ಅಥವಾ ಕಥಾ ಈ ಮೂರು ಬಗೆಯದಾಗಿದೆಯೋ ಎಂದು ಕೇಳಿದರೆ ಬೇರೆ ರೀತಿಯಲ್ಲಿ ಅಥವಾ ಎರಡು

ಕಂಡು ಬಂದರೆ, ಇನ್ನೊಂದು ರೀತಿಯಲ್ಲಿ ಅಲ್ಲವೆಂದು ತೋರುತ್ತದೆ. **ಸಂಪಾದನೆ** (ಚರ್ಚೆ)ಯು ಆಸ್ತಿಕರಲ್ಲಿಯ ಗೌತಮ, ವಾತ್ಸ್ಯಾಯನ, ವಾಚಸ್ಪತಿ ಮಿಶ್ರ ಹಾಗೂ ವರದರಾಜ ಮೊದಲಾದವರಂತೆ ಮೂಬಗೆಯದಿದ್ದು ರಚನಾತ್ಮಕ ಗುಣಾಧಿಕ್ಯದಿಂದ ಕೂಡಿದುದೆಂಬಂತಿದೆ. ಇದರಿಂದನ್ಯವಾದ ಅಭಿಪ್ರಾಯದ ಆಸ್ತಿಕ ವಿಜ್ಞಾನಿಗಳ ನಿಲವಿನಿಂದ ಭಿನ್ನವಾದುದು ಶರಣರದು ಎಂದು ಹೇಳಬೇಕಾಗುತ್ತದೆ. ಇದು ಅಲ್ಲದೆ ಒಗಟು ಬಿಡಿಸುವ ಲಕ್ಷಣವನ್ನೊಳಗೊಂಡೂ ಶರಣರ **ಸಂಪಾದನೆ** ಅಥವ **ಕಥೆ** (ಚರ್ಚೆ) ಇದೆ ಎಂದು ತಿಳಿಸಬೇಕಾಗುತ್ತದೆ. ಶಿವಶರಣ **ಸಂಪಾದನಾ** (**ಕಥಾ**) ಅಥವ **ಸಂಪಾದನೆಯು** ವಾದ ಮತ್ತು **ಪ್ರಸಂಗ** ಎಂಬ ಎರಡು ಬಗೆಯಾಗಿರುವುದು ಎಂದು ಹೇಳುವುದು ಸೂಕ್ತವೆಂದು ತೋರುತ್ತದೆ. ಪ್ರಸಂಗವು ವಿಧ್ವಂಸಕವಾಗಿರುವಂತೆ, ರಚನಾತ್ಮಕವೂ ಆಗಿರುತ್ತದೆ. ಶಿವಶರಣರಲ್ಲಿ ಇದನ್ನು ಪ್ರಾಚೀನ ಆಸ್ತಿಕ ಮತ್ತು ನಾಸ್ತಿಕ ದಾರ್ಶನಿಕರಂತೆ ಬಳಸಿದವರನ್ನು ಚೆನ್ನಬಸವಣ್ಣನವರು ಗುರುತಿಸಿದ್ದಾರೆ. ಚೆನ್ನಬಸವಣ್ಣನವರು '**ಉಂಟೆಬುದು ಬಸವಣ್ಣಕೊಂಡ**' ಎಂದು ಹೇಳುವುದು ಪ್ರಾಚೀನರು ಹೆಸರಿಸುವ **ಪ್ರಮಾಣವಾದಿ** ಎಂಬುವ ವರ್ಗಕ್ಕೆ ಬಸವಣ್ಣ ಸೇರಿದ್ದಾರೆಂದು ಅರ್ಥವಾದರೆ, "**ಇಲ್ಲೆಂಬುದನಲ್ಲಮ ಕೊಂಡ**" ಎಂದು ಹೇಳುವುದು ಪ್ರಾಚೀನರು **ಪ್ರಾಸಂಗಿಕ** ಎನ್ನುವ ವರ್ಗಕ್ಕೆ ಅಲ್ಲಮ ಸೇರಿದ್ದಾರೆಂದೂ ಅರ್ಥವಾಗುತ್ತದೆ. **ಪ್ರಸಂಗವು** ರಚನಾತ್ಮಕವೆಂಬ ಭಾರತೀಯರಲ್ಲಿಯ ಕೆಲವರ ಅಭಿಪ್ರಾಯವನ್ನು ಪಾಶ್ಚಿಮಾತ್ಯ ಆಧುನಿಕ ತರ್ಕಕೋವಿದ ರಾಯಿಲ್ (Rhyle) ಎಂಬುವವನು ತಿಳಿಸುವ strong reducto ಕೂಡ ರಚನಾತ್ಮಕ ಎಂದು ವಾದಿಸುತ್ತಾನೆಂದು ಭಾರತೀಯ ಅಂತಾರಾಷ್ಟ್ರಖ್ಯಾತಿಯ ಬಿ. ಕೆ. ಮತಿಲಾಲ ಎಂಬುವವರು ಹೇಳುತ್ತಾರೆಂಬುದು ಗಮನಾರ್ಹ. ಇದರ ಆದ್ಯ ಪ್ರವರ್ತಕ ನಾಗಾರ್ಜುನ ನಾಸ್ತಿಕರಲ್ಲಿ; ಯಜ್ಞವಲ್ಕ್ಯ ಆಸ್ತಿಕರಲ್ಲಿ ಎಂದು ಹೆಸರಿಸಬಹುದು. ಶೂನ್ಯ ಸಂಪಾದನೆಯ ಸಂಪಾದನೆಗಳು ಪ್ರಸಂಗ ವಿಧಾನದಕಿಂತಲೂ, **ಪ್ರಮಾಣ** ವಿಧಾನವನ್ನು ಬಳಸಿದ್ದು ಕಂಡುಬರುತ್ತದೆ.

ಇಲ್ಲಿ ಇನ್ನೊಂದು ವಿಷಯವನ್ನು ಎತ್ತಿ ತೋರಿಸುವುದು ಅವಶ್ಯವಿದೆಯೆಂದು ತೋರುತ್ತದೆ. ಇದು ಸಂಪಾದನೆಗಳ ಹುಟ್ಟನ್ನು ಕುರಿತಿರುವ

ವಿಚಾರ. ಹುಟ್ಟನ್ನು ಕುರಿತು ಎರಡು ಅಭಿಪ್ರಾಯಗಳಿವೆ. ಅವು ಇಂತಿವೆ.

೧. ಸಂಪಾದನೆಗಳು ಶಿವಗಣಪ್ರಸಾದಿ ಮಹದೇವಯ್ಯಗಳ **"ಮನದೊಳ್ ಸಂತಸದಿಂ ವಿರಚಿತ"** ಎಂಬುದು ಒಂದು.

೨. ಶಿವಗಣ ಪ್ರಸಾದಿ ಮಹದೇವಯ್ಯಗಳ ಶೂನ್ಯಸಂಪಾದನೆಯಲ್ಲಿಲ್ಲದವುಗಳನ್ನು ಸೇರಿಸಿದರು ನಂತರದವರು ಮನನೊಂದು ಎಂಬುದು ಎರಡನೆಯ ವಿಚಾರ ಅಥವ ಅಭಿಪ್ರಾಯ.

ಇವೆರಡು ವಿಚಾರಗಳಿಗೆ ಮೂಲಭೂತ ಆಕರವೆಂದರೆ ಶಿವಶರಣರು ಗೈದ ಸಂಪಾದನೆಗಳು. ಈ ಸಂಪಾದನೆಗಳು ತಾತ್ತ್ವಿಕ ಬದುಕಿನ ಅವಶ್ಯಕತೆಗೆ ಕಾರಣ. ತಾತ್ತ್ವಿಕ ಬದುಕನ್ನು ಬದುಕುವಾಗ ಉಂಟಾದ ಶಂಕೆಗಳನ್ನು ಪರಿಹರಿಸಲು ಸಂಪಾದನೆಗಳನ್ನು ನಡೆಯಿಸಬೇಕಾಯಿತು ಎಂಬುದು ಸರ್ವಮೂಲ ಪ್ರಸಂಗ. ಸಂಪಾದನೆಯೆಂದರೆ ತಾತ್ತ್ವಿಕ ಚರ್ಚೆ. ಪ್ರಸಂಗ ತಾತ್ತ್ವಿಕ ಚರ್ಚೆಗೆ ಕಾರಣ ಅಥವ ಸನ್ನಿವೇಶ.

ಇಲ್ಲಿ ಸಂಪಾದನೆ ಮತ್ತು ಪ್ರಸಂಗಶಬ್ದಗಳ ಪರಿಚಯ ಮಾಡಿದಂತಾಗಿದೆ.

# ವಚನಗಳಲ್ಲಿಯ 'ಅನುಭಾವ' ಪದದ ಅನ್ವೀಕ್ಷಿಕೀ ರೀತಿಯ ಒಂದು ಪರಿಶೀಲನೆ

**ಪ್ರಾಸ್ತಾವಿಕ ವಿಚಾರ :**

ಕನ್ನಡ ಸಾಹಿತ್ಯದಲ್ಲಿ, ನಿತ್ಯವೂ ಬಳಸುವ ಕನ್ನಡ ಮಾತಿನಲ್ಲಿ ಅನುಭವ ಎಂಬ ಪದವು ತುಂಬ ಬಳಕೆಯಲ್ಲಿದೆ. ಇದು ಎಲ್ಲರಿಗೂ ಗೊತ್ತಿರುವ ಸಂಗತಿ. ಶಾಸ್ತ್ರ ಸಾಹಿತ್ಯ ಮತ್ತು ಶಾಸ್ತ್ರೇತರ ಸಾಹಿತ್ಯದಲ್ಲಿ ಅನುಭವ ಪದದ ಬಳಕೆಯಿರುತ್ತದೆ. ಈಗ ಶಾಸ್ತ್ರಸಾಹಿತ್ಯದಲ್ಲಿ ಬರುವ ಅನುಭವ ಪದದ ಪರಿಶೀಲನೆಗೆ ಮಾತ್ರ ಈ ಲೇಖನದಲ್ಲಿ ಅವಕಾಶವಿರುತ್ತದೆ. ಅದರಲ್ಲೂ ವಚನಶಾಸ್ತ್ರ ಸಾಹಿತ್ಯವು ಈ ಪರಿಶೀಲನೆಯ ಆಕರ ಸಾಹಿತ್ಯವು. ವಚನಸಾಹಿತ್ಯದಲ್ಲಿ ಬರುವ ಅನುಭವ ಅಥವಾ ಅನುಭಾವದ ಪರಿಶೀಲನೆಯನ್ನು ಅನ್ವೀಕ್ಷಿಕೀಯ ದೃಷ್ಟಿಯಿಂದ ಮಾಡಲಾಗುತ್ತಿದ್ದು, ಅದು ಒಂದು ಅವಶ್ಯಕತೆಯೆಂಬುದನ್ನು ಸ್ಪಷ್ಟಗೊಳಿಸುತ್ತದೆ. ಇದರಿಂದ ವಚನ ಸಾಹಿತ್ಯವನ್ನು ಅಧ್ಯಯನ ಮಾಡುವವರಿಗೆ ಈ ಪದದ ನೂತನ ಪರಿಚಯವಾಗುವುದು; ಹಾಗೂ ವಚನಶಾಸ್ತ್ರದ ಈ ಪದಕ್ಕೆ ಭಾರತೀಯ ಅನ್ವೀಕ್ಷಿಕೀ ವಿಜ್ಞಾನ ನಕ್ಷೆಯಲ್ಲಿ ಇರುವ ಸ್ಥಾನಮಾನವನ್ನು ಗುರುತಿಸಲು ಸಾಧ್ಯವಾಗುವುದು.

**ಅನ ಭಾವ (ಅನುಭವ) ಪದದ ಹಸಿಗೆ :**

೧. ಅರ್ಥನಿಷ್ಪತ್ತಿ : ಅನುಭವ ಎಂಬುದು ಸಂಸ್ಕೃತ ಶಬ್ದವು. ಇದು 'ಭೂ–ಭವ್' ಎಂಬ ಕ್ರಿಯಾಪದದಿಂದ ಸಿದ್ಧವಾಗುತ್ತದೆ. ಭವ ಎಂದರೆ ಹುಟ್ಟು ಸೃಷ್ಟಿಗೊಳ್ಳು, ಆಗು ಎಂಬ ಅರ್ಥಗಳು. ವಚನಸಾಹಿತ್ಯದಲ್ಲಿ ಭವ ಅಂದರೆ ಸಂಸಾರ, ಜನನ ಮರಣಗಳ ಪುನರಾವೃತ್ತಿ ಎಂದು; ಅಥವಾ ಭವಿ ಎಂದಾಗ

ವೀರಶೈವ ಸಂಸ್ಕಾರ ವಿಹೀನ ಎಂದೂ ಅರ್ಥವಿದೆ. ಭವ ಅಂದರೆ ಶಿವನ ಸಹಸ್ರ ನಾಮಗಳಲ್ಲಿಯ ಒಂದು ನಾಮ. ಭವ ಎಂಬ ಪದಕ್ಕೆ ಅನು ಎಂಬ ಉಪಸರ್ಗ ವನ್ನು ಸೇರಿಸಲಾಗಿ ಅನುಭವ ಎಂಬ ಪದವು ಉಂಟಾಗುತ್ತದೆ. ಅನು ಎಂಬ ಉಪಸರ್ಗದ ಅರ್ಥಗಳು: ಹಿಂದೆ, ಹತ್ತಿರ, ನಿತ್ಯ, ಮುಂತಾದವುಗಳು. ಭವ ಎಂಬ ಶಬ್ದಕ್ಕೆ ಅನು ಉಪವರ್ಗವು ಸೇರಲಾಗಿ ನಿಷ್ಪನ್ನವಾದ ಅನುಭವ ಎಂಬ ಪದವು ನಿತ್ಯಸೃಷ್ಟಿಗೊಳ್ಳುವ ಎಂದು ಅರ್ಥ ಕೊಡುತ್ತದೆ. ಇದು ಯೋಗಾರ್ಥವು. ಅನುಭವ ಎಂದರೆ ನಿತ್ಯಸೃಷ್ಟಿಯಾಗು ಎಂಬ ಅರ್ಥವನ್ನು ಕೊಡುವ ಬೇರೊಂದು ಶಬ್ದವೆಂದರೆ ರುದ್ರ. ಇದು ಬಹು ಪ್ರಾಚೀನವಾದ ಪದವು. ಋಗ್ವೇದದಷ್ಟು ಪುರಾತನ. ಭಾರತೀಯ ವಿಜ್ಞಾನ (Indology) ಪಂಡಿತರು ರುದ್ರ ಎಂಬ ಪದದ ಅರ್ಥವಿವರಣೆಯನ್ನು ಮಾಡುತ್ತ ನಿತ್ಯಸೃಷ್ಟಿ ಹಾಗೂ ಲಯ ಎಂದು ತಿಳಿಸುತ್ತಾರೆ. ಆದುದರಿಂದ ಅನುಭವ ಮತ್ತು ರುದ್ರ ಎಂಬ ಪದಗಳ ಯೋಗಾರ್ಥವು ಒಂದೇ ಎಂದು ಹೇಳಿ ಇವೆರಡು ಪದಗಳು ಸಮಾನಾರ್ಥದ ಪದಗಳೆಂದೆನ್ನಬೇಕಾಗುತ್ತದೆ. ಅನುಭವ ಎಂದರೆ ನಿತ್ಯಸೃಷ್ಟಿ ಎಂಬರ್ಥವು. ಆ ಪದವು ಕ್ರಿಯಾತ್ಮಕವೆಂದು ಕಂಡು ಬರುತ್ತದೆ. ಕ್ರಿಯಾಕಲಾ ಅನುಭವ ಶಬ್ದದಲ್ಲಿದೆ ಎಂದು ಖಚಿತವಾಗುತ್ತದೆ. ಇದು ಶಕ್ತಿವಿಶಿಷ್ಟ ತತ್ವಪ್ರತಿಪಾದಕ ಪದವು. ವೈದಿಕ ಸಾಹಿತ್ಯದಲ್ಲಿ ಬರುವ ರುದ್ರ, ರುದ್ರ–ಶಿವ ಎಂಬಭಿದಾನದ ತತ್ವವು ಶಕ್ತಿವಿಶಿಷ್ಟವೆಂದು ಪ್ರತಿಪಾದನೆಯಿದೆ'[೧] ಅನುಭವವು ತತ್ವದ ಸದ್ಭಾವವನ್ನು ಬೋಧಿಸುತ್ತದೆ. ಅದೇ ರೀತಿ ಅದು ತತ್ವದ ಬೋಧೆ (ಜ್ಞಾನ)ಯನ್ನು ಪ್ರತಿಪಾದಿಸುತ್ತದೆ. ಜ್ಞಾನಬೋಧಪರ ಪದವೆಂಬುದು ಹೊಸ ಸಂಗತಿ. ಈ ಹೊಸ ಅರ್ಥವು ಅನುಭಾವ ಅಥವ ಅನುಭವ ಶಬ್ದಕ್ಕೆ ಉಂಟಾಗುವದು ಯೋಗಾರ್ಥದಿಂದಲ್ಲ. ಅಂದರೆ ಯೋಗಾರ್ಥದಿಂದ ಭಿನ್ನವಾದ ರೂಢಾರ್ಥದಿಂದ. ಯೋಗ ಮತ್ತು ರೂಢಿ ಇವೆರಡೂ ಅರ್ಥನಿಷ್ಪತ್ತಿಯ ಶಾಸ್ತ್ರೀಯ ವಿಧಾನಗಳೆ. ಈ ಮಾತು ಭಾರತೀಯ ಮತ್ತು ಪಾಶ್ಚಿಮಾತ್ಯ ದರ್ಶನ ವಿದ್ಯಾರ್ಥಿಗಳಿಗೆ ಚೆನ್ನಾಗಿ ಗೊತ್ತು.

ಇಲ್ಲಿ ಒಂದು ಮಾತನ್ನು ಸ್ಪಷ್ಟಪಡಿಸಬೇಕಾಗುತ್ತದೆ. ಅನುಭವ ಎಂದರೆ ಜ್ಞಾನ. ಅದರಲ್ಲೂ ಪ್ರತ್ಯಕ್ಷ ಪ್ರಮಾಣ ಎಂಬ ಅರ್ಥವಿರುತ್ತದೆ. ಈ ಪ್ರತ್ಯಕ್ಷ

ಪ್ರಮಾಣ ಅಥವ ಪ್ರತ್ಯಕ್ಷ ಜ್ಞಾನವನ್ನು ವಿದ್ಯೆಯೆಂದೂ ಹೇಳುತ್ತಾರೆ. ವಿದ್ಯೆಯೆಂದರೆ ಆತ್ಮವಿದ್ಯೆ ಅಥವಾ ಆತ್ಮಪ್ರತ್ಯಕ್ಷ ಜ್ಞಾನ ಎಂಬುದನ್ನು ಭಾರತೀಯರು ಪ್ರತಿಪಾದಿಸುತ್ತಾರೆ. ಆತ್ಮವಿದ್ಯೆ ಎಂಬ ಅರ್ಥದಲ್ಲಿ ಅನುಭವ ಶಬ್ದವನ್ನು ಆಸ್ತಿಕ ದಾರ್ಶನಿಕರು ಸುಪ್ರಸಿದ್ಧವಾಗಿ ಬಳಸಿದ್ದಾರೆ. 'ಅನುಭಾವ'ವೆಂಬುದು ಆತ್ಮವಿದ್ಯೆ. ಅನುಭಾವವೆಂಬುದು ತಾನಾರೆಂಬುದ ತೋರಿಸುವುದು' ಎಂದು ಶರಣರು[೨] ಹೇಳುತ್ತಾರೆ. 'ಆತ್ಮವಾತ್ಮಮಥನಿಸಿ ಅನುಭಾವ ಹುಟ್ಟಿ ತನುಗುಣಗಳ ಸುಡಲಾಯಿತ್ತು'[೩] ಎಂದು ಮಹಾದೇವಿಯಕ್ಕನವರು ಹೇಳುವುದು ಅನುಭಾವ ಅಂದರೆ ಆತ್ಮ ಆತ್ಮಗಳ ಮಂಥನದಿಂದ ಹುಟ್ಟುವ ಜ್ಞಾನಾಗ್ನಿ ಎಂದು ಸ್ಫುಟವಾಗಿ ವ್ಯಕ್ತಗೊಳಿಸುತ್ತದೆ. ಇವೆರಡು ಪ್ರಯೋಗಗಳು ಅನುಭಾವ ಶಬ್ದದ ರೂಢಾರ್ಥವನ್ನು ಖಚಿತಗೊಳಿಸುತ್ತವೆ. ಮೀಮಾಂಸಕರು, ಅದ್ವೈತಿಗಳು, ನೈಯ್ಯಾಯಿಕರು, ಸಾಂಖ್ಯರು, ಬೌದ್ಧರು ಅನುಭವ ಶಬ್ದವನ್ನು ಬಳಸಿದಂತೆ ಶಿವಶರಣರು ಅನುಭಾವ ಶಬ್ದವನ್ನು ಬಳಸಿದ್ದಾರೆಂದು ಗೊತ್ತಾಯಿತು, ಆದುದರಿಂದ ಅನುಭವ ಮತ್ತು ಅನುಭಾವಗಳೆರಡೂ ಒಂದೇ ಅರ್ಥವನ್ನು ಕೊಡುತ್ತವೆ. ಅನುಭವದಿಂದ ಅನುಭಾವ ಎಂಬ ಪದವು ಬೇರೆ ಅರ್ಥ ಬೋಧಕವೆಂದು ತಿಳಿದವರ ವಿಚಾರದಲ್ಲಿ ಹುರುಳಿಲ್ಲವೆಂದು ಬೇರೆ ಹೇಳಬೇಕಿಲ್ಲ.

ವಚನಕಾರರಿಗೆ ಈ ಎರಡೂ ಬಗೆಯ ಅರ್ಥಗಳು—ಯೋಗಾರ್ಥ ಮತ್ತು ರೂಢಾರ್ಥಗಳು—ಗೊತ್ತುಂಟು. ಯಾಕೆಂದರೆ ಅವರು ಅನುಭಾವ ಪದವನ್ನು ಈ ಎರಡೂ ಅರ್ಥಗಳಲ್ಲಿ ಬಳಸಿದ್ದಾರೆ. 'ಅನುಭಾವವೆಂಬುದು ಅಂತರಂಗದ ರತ್ನ' ಎಂಬ ವಚನಕಾರರ ವಿಚಾರವು ಅನುಭಾವವು ಅಂತರಂಗವಾಸಿ ವಸ್ತು ಎಂಬರ್ಥ ಕೊಡುತ್ತದೆ. ಆ ವಸ್ತುವೆ ಸರ್ವಮೂಲಬ್ರಹ್ಮ. ಈ ಸಂದರ್ಭದಲ್ಲಿ ಅನುಭಾವ ಶಬ್ದದಿಂದುಂಟಾಗುವ ಖಚಿತಾರ್ಥವು ಇದೇ. ಅನುಭವ ಪದದ ಯೋಗಾರ್ಥದಿಂದ ಇದು ಭಿನ್ನವಲ್ಲ.

ಇನ್ನು ವಚನಕಾರರು ರೂಢಾರ್ಥಕ್ಕನುಗುಣವಾಗಿ ಅನುಭಾವ ಶಬ್ದವನ್ನು ಬಳಸಿರುವುದನ್ನು ನೋಡಬಹುದು. ಬಸವಣ್ಣನವರು ತಮ್ಮ ಒಂದು ವಚನದಲ್ಲಿ ಅನುಭಾವ ಶಬ್ದವನ್ನು ಹೀಗೆ ಬಳಸಿದ್ದಾರೆ : 'ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯಾ; ಜ್ಯೋತಿಯ ಬಲದಿಂದ ತಮಂಧದ ಕೇಡ

ನೋಡಯ್ಯ; ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯಾ; ಪರುಷದ ಬಲದಿಂದ ಅವಲೋಹದ ಕೇಡ ನೋಡಯ್ಯ; ಕೂಡಲಸಂಗನ ಶರಣರ ಅನುಭಾವದಿಂದ ಎನ್ನಮನದ ಕೇಡ ನೋಡಯ್ಯ.'* ಆತ್ಮ ವಿಜ್ಞಾನದಿಂದ ಮನದ ನಿರಸನವೆಂಬುದು ವಚನಶಾಸ್ತ್ರದ ಅಥವಾ ಶಿವಾನುಭವದ ನಿರ್ಣಯ. ಈ ಮೂಲಭೂತವಾದ ವಿಚಾರ ತತ್ವಜ್ಞಾನಿಗಳಾದ ಬಸವಣ್ಣನವರು ಅನುಭವದಿಂದ ಮನದ ಕೇಡು ಎಂದು ಹೇಳುವಾಗ ಅನುಭಾವವೆಂಬ ಮಹಾಜ್ಯೋತಿಜ್ಞಾನದಿಂದಲೇ ಅಮನಸ್ಕದ ಸಿದ್ಧಿ ಎಂದು ಅವರ ವಿಚಾರ. ಇದೇ ವಿಚಾರವನ್ನು ಅವರು ಇನ್ನೊಂದೆಡೆಯಲ್ಲಿ ಹೀಗೆ ಹೇಳಿದ್ದಾರೆ : 'ಕೂಡಲಸಂಗಮದೇವಾ, ನಿಮ್ಮ ಅನುಭಾವದಿಂದ ಎನ್ನ ಭವಂ ನಾಸ್ತಿಯಾಯಿತ್ತು' ಕೂಡಲಸಂಗಮದೇವರ ಅನುಭಾವವೆಂದರೆ ಪರವಸ್ತುವಿನ ಅಥವಾ ಆತ್ಮದ ಜ್ಞಾನವೆಂದೇ ಅರ್ಥವಾಗುತ್ತದೆ. 'ಭಕ್ತಿಗೆ ಅನುಭಾವವೇ ಬೀಜ' ಎಂಬ ಮಾತು ವಚನಕಾರರ ಅಭಿಪ್ರಾಯವೊಂದರ ಪ್ರಕಾರ ಅಥವಾ ವೀರಶೈವ ಶಾಸ್ತ್ರಕೋವಿದರ ಪ್ರಕಾರ ಭಕ್ತಿಯು ಜ್ಞಾನೋದಯದನಂತರ ಸಿದ್ಧಿಸುವುದು, ಹುಟ್ಟುವುದು ಎಂದು. ಆದುದರಿಂದ ವೀರಶೈವರ ಭಕ್ತಿಯು ಜ್ಞಾನೋತ್ತರ ಭಕ್ತಿಯೆಂದು ಹೇಳುವರು. ಭಕ್ತಿಗೆ ಅನುಭಾವವೇ ಬೀಜವೆಂದಾಗ ಅನುಭಾವಮೂಲದ್ದು–ಜ್ಞಾನಮೂಲದ್ದು–ಭಕ್ತಿ ಎಂಬರ್ಥವಾಗುತ್ತದೆ. ಜ್ಞಾನೋತ್ತರ ಭಕ್ತಿಯು ಕೇವಲ ವೀರಶೈವರ ಭಕ್ತಿ ಲಕ್ಷಣ ವಿಶೇಷವೆಂದು ಮಾತಾಡುವವರೂ ಇದ್ದಾರೆ. ಇದು ತಪ್ಪು ಭಾವನೆ. ಮಾಧ್ವರು, ರಾಮಾನುಜೀಯರೂ ಜ್ಞಾನೋತ್ತರಭಕ್ತಿ ಎಂದೇ ಪ್ರತಿಪಾದಿಸುತ್ತಾರೆ. ವಸ್ತುಶಾಸ್ತ್ರಕ್ಕನುಸರಿಸಿ ಮಾಧ್ವದರ್ಶನ, ರಾಮಾನುಜದರ್ಶನ, ಶಾಕ್ತದರ್ಶನ ಮತ್ತು ವೀರಶೈವ ದರ್ಶನ ಇವುಗಳಲ್ಲಿ ಆ ಶಬ್ದದ ಅರ್ಥಛಾಯೆಯು ಭಿನ್ನ ಭಿನ್ನವಾಗುವುದು ಸಾಧ್ಯವಿದೆ. ಅನುಭಾವ ಶಬ್ದವನ್ನು ತತ್ವ, ಭಕ್ತಿ ಮತ್ತು ವಿಜ್ಞಾನಗಳಲ್ಲಿ ವಚನಕಾರರು ಬಳಸಿ ಅವರ ಸ್ಥಾನಮಾನವನ್ನು, ಕಾರ್ಯಕ್ಷೇತ್ರವನ್ನು ನಿರ್ಣಯಿಸಿದ್ದಾರೆ.

**ಅನುಭವ ಅಥವಾ ಅನುಭಾವವು ವಾದವಿದ್ಯಾ (ಅನ್ವೀಕ್ಷಿಕೀ) ತತ್ವಗಳಲ್ಲಿ ಒಂದು :**

ಚಂದ್ರೋದಯ ಭಟ್ಟಾಚಾರ್ಯನು **Elements of Indian Logic and Epistemology** ಎಂಬ ಗ್ರಂಥದಲ್ಲಿ ಅನುಭವ ಎಂಬ ಶಬ್ದವು ಜ್ಞಾನ

ಭೋಧಕವಾಗಿದ್ದು ಅನುಮಾನ, ಉಪಮಾನ ಹಾಗೂ ಶಬ್ದಜನ್ಯ ಜ್ಞಾನವೂ ಅನುಭವ ಎಂದು ತಿಳಿಸುತ್ತಾನೆ : The positive term in Samskrit for the latter (i. e. not recollection) is anubhava. for which, perhaps, there is on suitable English equivalent. The word experience which has been suggested by some is quite inappropriate. For experience means knowledge which is based no present observation and contact; but anubhava includes, as will presently appear, not only perception, but also knowledge derived from such indir ect processes as inference, analogy and verbal testi- mony.[೬] ಅನ್ನಂಭಟ್ಟನ ತರ್ಕಸಂಗ್ರಹವನ್ನು ಕುರಿತು ಬರೆಯುತ್ತ ಅನುಭವ ಶಬ್ದದ ಬಗ್ಗೆ ವಿಚಾರ ವ್ಯಕ್ತ ಪಡಿಸಿರುವುದೆಲ್ಲ ಸ್ಮರಣೀಯವಾಗಿದೆ. ನೈಯ್ಯಾಯಿಕರ ಶಾಸ್ತ್ರದ ಬೆಳವಣಿಗೆಯ ಚರಿತ್ರೆಯಲ್ಲಿ ಅನ್ನಂಭಟ್ಟನು ತೀರ ಇತ್ತೀಚಿನವನು. ಆದುದರಿಂದ ಆತನಿಗಿಂತಲೂ ಪೂರ್ವದ ದರ್ಶನದ ಬೆಳವಣಿಗೆಯ ಪರಿಚಯ ಅವನಿಗಿರಲು ಸಾಕು. ಆತನು 'ಬುದ್ಧಿಃ ಉಪಲಬ್ಧಿಜ್ಞಾನಮಿತ್ಯನರ್ಥಾಂತರಮ್' (೧.೧.೫ ನ್ಯಾಯಸೂತ್ರ)ವನ್ನು ಬಲ್ಲವನು. ಅದರಲ್ಲಿ ಬರುವ ಬುದ್ಧಿ (ಅಂದರೆ ಜ್ಞಾನ ಅಥವ ಉಪಲಬ್ಧಿ)ಯನ್ನು ವರ್ಗೀಕರಿಸುತ್ತ ಅನುಭವ ಹಾಗೂ ಸ್ಮೃತಿ (memory) ಎಂದು ಹೇಳುತ್ತಾನೆ. ಅನುಭವವು ಯತಾರ್ಥಾನುಭವ ಮತ್ತು ಅಯಾತಾರ್ಥಾನುಭವ ಎಂದು ಎರಡು ಬಗೆಯಿದೆ ಎಂದು ಹೇಳಿ ಯತಾರ್ಥಾನುಭವವು ಪ್ರತ್ಯಕ್ಷ, ಅನುಮಿತಿ, ಉಪಮಿತಿ ಮತ್ತು ಶಬ್ದ ಎಂದು ನಾಲ್ಕು ಪ್ರಕಾರವಿರುವದೆಂದು ತಿಳಿಸುವನು. ಈ ಚತುರ್ವಿಧ ಜ್ಞಾನ ಸಂಪಾದನೆಯ ಸಾಧನಗಳು (ಪ್ರಮಾಣಗಳು) ಅನುಕ್ರಮವಾಗಿ ಪ್ರತ್ಯಕ್ಷ ಅನುಮಾನ, ಉಪಮಾನ ಮತ್ತು ಶಬ್ದ ಎಂದು ನಾಲ್ಕು ಬಗೆಯಾದವು. ಇವು ಬುದ್ಧಿಯ ಸಾಧನಾಂಗಗಳು.

ಲೌಗಾಕ್ಷಿ ಭಾಸ್ಕರನು ತರ್ಕಕೌಮುದಿಯಲ್ಲಿ ಆತ್ಮಲಕ್ಷಣವಾದ ಬುದ್ಧಿಯು ಅನುಭವ ಮತ್ತು ಸ್ಮೃತಿ ಎಂದು ವರ್ಗೀಕರಿಸುವನು.[೭] ಅನುಭವವು ಪ್ರಮಾ ಮತ್ತು ಅಪ್ರಮಾ ಎಂದು ತಿಳಿಸುವನು. ಪ್ರಮಾವನ್ನು ಸಂಪಾದಿಸುವ

ಸಾಧನವು ಪ್ರಮಾಣ. ಇದು ಇತ್ತರನಿದ್ದು ಪ್ರತ್ಯಕ್ಷ ಹಾಗೂ ಅನುಮಾನ ವೆಸ್ನುವನು.

ನವದ್ವೀಪ ನ್ಯಾಯಃಪಂಥ ನಿರ್ಮಾಪಕನಾದ ರಘುನಾಥ ಶಿರೋಮಣಿಯು ಅನುಭಾವಲ್ ಎಂಬ ಪದವನ್ನು ಬಳಸಿದ್ದು ಗಮನಾರ್ಹ. ಈತನು ನವ್ಯನ್ಯಾಯ ಪ್ರಾಚಾರ್ಯೋತ್ತಮರಲ್ಲೊಬ್ಬನು. ಅನುಭಾವವೆಂದರೆ ಪ್ರತ್ಯಕ್ಷವೆಂದು ಆತನ ಪ್ರತಿಪಾದನೆ. ಜಾತಿ ಎಂಬುದು ಪ್ರತ್ಯಕ್ಷ ಬೋಧವೇ ವಿನಾ ಶಬ್ದ, ಸ್ಮೃತಿ ಮೊದಲಾದವುಗಳಿಂದುಂಟಾಗುವ ಜ್ಞಾನದಲ್ಲಿ ಅದು ಆಗಲಾರದೆಂದು ಆತನ ಅಭಿಪ್ರಾಯ. This universal applies only to the knowledge of the perceptual sort, not to those gained by inference, comparison or verbal authority...''[೯] ಅನುಭಾವ ಶಬ್ದವು ನವ್ಯ–ನೈಯ್ಯಾಯಿಕರಲ್ಲಿ ಅದೆಂತು ಅರ್ಥವ್ಯಾಪ್ತಿಯಲ್ಲಿ ಅಂತರವನ್ನು ಹೊಂದುತ್ತ ಹೋಯಿತು ಎಂಬುದು ಇಲ್ಲಿ ಗೊತ್ತಾಗುತ್ತದೆ.

ಅದ್ವೈತ ವೇದಾಂತಿಗಳಲ್ಲಿ ಕೆಲವರು ಅನುಭವವನ್ನು ಪ್ರಮಾಣವೆಂದು ಪರಿಗಣಿಸುತ್ತಾರೆ. 'The Naiyayikas, Buddhists, Mimamaakas, and some of the Vedantins regard presentative (anubhavatmaka) knowledge-that is to say, knowledge not solely dependent on past and other impressions-alone is valid, though other cognitions also might very well be correct.

The Indian thinkers in the main recognised this as one of the fundamental sources of knowledge and there fore they found a place for this source of knowledge in their scheme of pramanas along with sensuous empirical experience and the reasoning based on it. This fact has been mentioned here because the understanding of logic and epistemology would be incomplete without this com plement. In the western systems of thought this type

of knowledge has been excluded from Logic and put it into the category of revelation which is supposed to be source of religious truth.೧೦

ಯಥಾರ್ಥಜ್ಞಾನ ಸಾಧನವಾದ ಅನುಭಾವ (ಅನುಭವ) ಪ್ರಮಾಣ ವನ್ನು ಭಾರತೀಯ ದಾರ್ಶನಿಕರು ಮನ್ನಿಸಿ, ಉಳಿದ ಜ್ಞಾನಸಾಧನ (ಪ್ರಮಾಣ) ಗಳಿಗಿಂತ ಅದು ಹೆಚ್ಚು ಎಂದು ಪರಿಗಣಿಸಿದರು, ಅದು ಪ್ರಮಾಣಗಳಲ್ಲೆಲ್ಲ ಮಹತ್ವದ ಪ್ರಮಾಣವೆಂದು ನಿರ್ಣಯಿಸಿದರು. ಆಸ್ತಿಕ ದರ್ಶನಗಳಂತೆ ನಾಸ್ತಿಕ ದರ್ಶನಗಳೂ ಅದನ್ನು ಎತ್ತಿಹಿಡಿದವು. ಭಾರತೀಯರು ಅನುಭಾವವನ್ನು ಪ್ರತ್ಯಕ್ಷ ಪ್ರಮಾಣವೆಂಬುದನ್ನು ಬೇರೆ ಅರ್ಥದಲ್ಲಿ ಮನ್ನಿಸುವದಿಲ್ಲ. ಅವರು ಪ್ರತ್ಯಕ್ಷವೆಂದರೆ ಇಂದ್ರಿಯ ಪ್ರತ್ಯಕ್ಷವೆನ್ನುವರು. ಅನುಭಾವವನ್ನು ಅವರು intuition ಎಂದು ಕರೆದು ಅದು ತತ್ವಜ್ಞಾನ ಕ್ಷೇತ್ರಕ್ಕೆ ಸೇರುವದಿಲ್ಲ ವೆನ್ನರು.

ಭಾರತೀಯರು ಅನುಭಾವಕ್ಕೆ ದಾರ್ಶನಿಕ (Metaphysical) ಸ್ಥಾನವನ್ನು ಕೊಡುವದನ್ನು ತಮ್ಮದೇ ಆದ ರೀತಿಯಲ್ಲಿ ತಿಳಿಸುವರು. 'Anubhava cannot be experienced since according to wes tern tradition experience is taken as sense-originated. Whereas in the Nyaya text it admits not only sense perce ption (pratyksa), but also inference (anumana), analogy (upamana) and language (sabda) as its source. It also cannot be apprehension as in that case it would not be much different from upalabdhi which is, in the Nyaya classlfication, taken to be the genus of anubhava. I, Therefore, take it to be presentational judgement where the presentational character is the distinguishing mark (tatvamanaropitam rupam tasya jnanamanubhavam.)೧೧

ಜ್ಞಾನಪ್ರಾಪ್ತಿಯ ಸಾಧನಗಳಲ್ಲಿ ಪ್ರತ್ಯಕ್ಷವನ್ನುಳಿದು ಇರುವ ಅನುಮಾನ ಉಪಮಾನ, ಹಾಗೂ ಶಬ್ದಗಳು ಅನುಭಾವ ಪ್ರಮಾಣಾಂತರ್ಗತ ಪ್ರಮಾಣ

ಗಳೆಂದು ಪ್ರತಿಪಾದಿಸಿರುವುದನ್ನು ನೋಡಿದರೆ ಭಾರತೀಯರು ಅದಕ್ಕೆ ಪ್ರಮಾಣ ಶಾಸ್ತ್ರದಲ್ಲಿ ಮಹತ್ವದ ಸ್ಥಾನವನ್ನು ಕೊಟ್ಟ ಕಾರಣಗಳನ್ನು ಬೇರೆಡೆ ಹುಡುಕಬೇಕಾಗಿಲ್ಲ. ಅನುಭವ (ಅನುಭಾವ)ವೆಂದರೆ ನೈಯ್ಯಾಯಿಕರಲ್ಲಿ ಜ್ಞಾನ–ಪ್ರಮಾ ಸಂಪಾದನ ಚತುಷ್ಟಯವೆಂದು ಹೇಳಿದಾಗ ಅದು ಪ್ರಮಾಣ ಚತುಷ್ಕಂದ.[೧೨] ವೇದಾಂತಿಗಳು ಅಥವಾ ಉಪನಿಷತ್ಕಾರರು ಹೇಳುವಾಗ ಅನುಭಾವವು ಪ್ರಮಾಣ ಚತುಷ್ಕಂದವಾಗಿರದೆ ಅದೊಂದು ವಿಶಿಷ್ಟ, ಪ್ರತ್ಯೇಕ ಹಾಗೂ ಸ್ವತಂತ್ರ ಪ್ರಮಾಣವೇ ಆಗಿರುತ್ತದೆ. ಇದನ್ನು ಅಲೌಕಿಕ ಪ್ರತ್ಯಕ್ಷ ವೆಂದು ಹೆಸರಿದರೂ ಅದು ನೈಯ್ಯಾಯಿಕರ ಅಲೌಕಿಕ ಪ್ರತ್ಯಕ್ಷದಿಂದ ಭಿನ್ನ ವಾಗಿರುತ್ತದೆ. ವಿಶಿಷ್ಟವಾದ ಅರ್ಥದಲ್ಲಿ ಅನುಭಾವವು ಸಾಂಖ್ಯ–ಯೋಗದ ಹಾಗೂ ಜೈನದರ್ಶನದ ಯೋಗ ಪ್ರತ್ಯಕ್ಷದಿಂದಲೂ ಭಿನ್ನವಾಗಿರುತ್ತದೆ. ಬೌದ್ಧರು ಸಹ ಪ್ರತ್ಯಕ್ಷದಲ್ಲಿ ಇಂದ್ರಿಯಪ್ರತ್ಯಕ್ಷ, ಮಾನಸಪ್ರತ್ಯಕ್ಷ, ಸ್ವವಿಮರ್ಶಾ ಪ್ರತ್ಯಕ್ಷ ಮತ್ತು ಯೋಗೀಪ್ರತ್ಯಕ್ಷಗಳೆಂದು ಚತುರ್ವಿಧ ಪ್ರತ್ಯಕ್ಷವನ್ನು ಗುರುತಿ ಸುತ್ತಾರೆ. ದಿಙ್ನಾಗ ಮತ್ತು ಧರ್ಮಕೀರ್ತಿಗಳಲ್ಲಿ ಇದನ್ನು ನೋಡಬಹುದು.

## ೨. ವಚನಶಾಸ್ತ್ರದಲ್ಲಿ ಅನುಭಾವವೂ ಹಾಗೂ ವಾದವಿದ್ಯೆಯೂ :

(ಅ) ವಚನಕಾರರು ಅನುಭಾವ ಎಂಬ ಪದವನ್ನು ಬಳಸಿದ ಸಂದರ್ಭದ ಮೇಲಿಂದ ಅದರ ಅರ್ಥವನ್ನು ನಿರ್ಣಯಿಸಬೇಕಾಗುತ್ತದೆ. ಬಸವಣ್ಣನವರ ಒಂದು ವಚನವನ್ನಿಲ್ಲಿ ಎತ್ತಿಕೊಂಡು ನೋಡಬಹುದು :

ವಚನಾನುಭಾವವ ಮಾಡುವಯ್ಯಗಳಿರಾ
ನಿಮಗೆ ವಚನ ಪ್ರಾಣಲಿಂಗವೋ ?
ಅಲ್ಲದೆ ದಾಸೋಹ ಪ್ರಾಣಲಿಂಗವೋ ?......

ಇಲ್ಲಿ ಬರುವ ವಚನಾನುಭಾವ ಎಂಬ ಪದವನ್ನು ಬಿಡಿಸಿದಾಗ ವಚನ–ಅನು ಭಾವ ಎಂದು ಆಗುತ್ತದೆ. ವಚನದ ಅನುಭಾವ ಮಾಡುವುದು ಎಂದರೆ ವಚನಶಾಸ್ತ್ರದ (ಇಲ್ಲವೆ ವಚನಗಳ) ಮಂಥನ ಅಥವ ಹಸಿಗೆ ಮಾಡುವುದು ಎಂದು ಅರ್ಥವಾಗುತ್ತದೆ. ಭಾರತೀಯ ಶಾಸ್ತ್ರ ಪರಿಭಾಷೆಯಲ್ಲಿ ಇದನ್ನು– ಅಂದರೆ ವಚನಾನುಭವ ಎಂಬುದನ್ನು – ತಿಳಿಸಬೇಕೆಂದರೆ ಪದಗಳ ಮತ್ತು

ವಾಕ್ಯಗಳ ಪರಿಶೀಲನೆಯಾಗಿರುತ್ತದೆ. ಇದು ಯೋಗಾರ್ಥದ ದೃಷ್ಟಿಯಿಂದ, ರೂಢಾರ್ಥದ ದೃಷ್ಟಿಯಿಂದ, ಯೌಗಿಕ ರೂಢಾರ್ಥಕ ದೃಷ್ಟಿಯಿಂದ, ಮತ್ತು ವಾಕ್ಯರಚನಾ ಹಾಗೂ ಸಮಸ್ತ ವಾಕ್ಯ ಸಾರಾಯದ ದೃಷ್ಟಿಯಿಂದ ಇರಬಹುದು. ಅದೇ ರೀತಿ ಕಾರ್ಯಕಾರಣ ಭಾವವನ್ನು ವಚನ (ಶಬ್ದ)ದಲ್ಲಿ ಕಂಡು ಪರವಸ್ತುವಿನ ಅಸ್ತಿತ್ವವನ್ನರಿವುದೂ ಅಹುದು.[೧೩]

ಈ ವಚನದಲ್ಲಿ ಬಂದ 'ವಚನಾನುಭಾವವ ಮಾಡುವ' ಎಂದಾಗ ವಚನ ಶಾಸ್ತ್ರವನ್ನು ಕುರಿತು ತರ್ಕ ಮಾಡುವುದು, ವಾದವಿವಾದ ಮಾಡುವುದು ಎಂಬರ್ಥವು ನಿಷ್ಪನ್ನವಾಗುವುದರಿಂದ ಅನುಭಾವ ಎಂಬ ಪದವು ಪ್ರಮಾಣ ಶಾಸ್ತ್ರದ ಹಾಗೂ ವಾದಶಾಸ್ತ್ರದ ತತ್ವ (category) ಎಂಬರ್ಥವನ್ನು ಕೊಡುವುದು. ಪ್ರತ್ಯಕ್ಷ, ಅನುಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ ಮುಂತಾದವುಗಳು ಪ್ರಮಾಣ ಶಾಸ್ತ್ರದ ತತ್ವಗಳು. ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡ, ಛಲ ಮುಂತಾದವುಗಳು ವಾದ ಶಾಸ್ತ್ರದ ತತ್ವಗಳು ಎಂದು ವರ್ಗೀಕರಿಸುವರು. ವಾದವಿದ್ಯಾ ಎಂದಾಗ ಪುನಾ ಪ್ರಮಾಣ ಮತ್ತು ವಾದ ಎಂಬೆರಡೂ ವಿಭಾಗಗಳೆಂದೇ ಅರ್ಥವಿದೆ. ಇವೆರಡೂ ಅನ್ವೀಕ್ಷಿಕೀಯ ಅಂಗಗಳು. ವಚನಶಾಸ್ತ್ರದಲ್ಲಿ ಬರುವ ಅನುಭಾವ ಶಬ್ದವನ್ನು ಅಲ್ಲಿಯ ಸಂದರ್ಭಕ್ಕನುಸರಿಸಿ ನೋಡಿದಾಗ ಅನ್ವೀಕ್ಷಿಕೀಯ ಈ ಎರಡೂ ಅಂಗಗಳ ಅರ್ಥವನ್ನು ಕೊಡುವುದು ಎಂಬುದು ನಮಗೆ ಮನವರಿಕೆಯಾಗದಿರದು. ಇನ್ನು ಮುಂದೆ ಇದೇ ಲೇಖದಲ್ಲಿ ಈ ಸಂಗತಿಯನ್ನು ಅರಿತುಕೊಳ್ಳಬಹುದು. ನ್ಯಾಯ–ವೈಶೇಷಿಕ, ಪೂರ್ವಮೀಮಾಂಸಾ, ಉತ್ತರ ಮೀಮಾಂಸಾ, ಬೌದ್ಧ ಮೊದಲಾದ ದರ್ಶನಗಳಲ್ಲಿ ಬಳಸಲಾದ ಅನುಭವ ಶಬ್ದಕ್ಕಿರುವ ಅರ್ಥಗಳಿಗೆ ಪರ್ಯಾಯ ಪದವಾಗಿ ವಚನಕಾರರು ಅನುಭಾವ ಎಂಬ ಪದವನ್ನು ಬಳಸಿದ್ದಾರೆ.

ಅ. ಬಸವಣ್ಣನವರು ತಮ್ಮ ಇನ್ನೊಂದು ವಚನದಲ್ಲಿ ಅನುಭಾವ ಎಂಬ ಪದವನ್ನು ಬಳಸಿರುತ್ತಾರೆ. ಈ ಸಂದರ್ಭದಲ್ಲಿ ಅದರ ಅರ್ಥವು ಏನು ಆಗುತ್ತದೆ ಎಂಬುದನ್ನು ನೋಡಬೇಕು :

ಭಕ್ತಿಯೆಂಬ ನಿಧಾನವ ಸಾಧಿಸುವರೆ,
ಶಿವಪ್ರೇಮವೆಂಬಂಜನವ ನಚ್ಚಿಕೊಂಬುದು.

ಭಕ್ತನಾದವಂಗೆ ಇದೆ ಪಥವಾಗಿರಬೇಕು.
ನಿಮ್ಮ ಕೂಡಲ ಸಂಗನ ಶರಣರನುಭಾವ
ಜಗವೈದ್ಯವಯ್ಯಾ.೧೪

ಈ ವಚನದಲ್ಲಿ ಬಸವಣ್ಣನವರು ಎರಡು ಪ್ರಮಾಣಗಳನ್ನು ತಿಳಿಸಿದ್ದಾರೆ. ಒಂದು ಶಿವಪ್ರೇಮ.ವೆಂಬುದು ಮಾರ್ಗ. ಇನ್ನೊಂದು ಶರಣರನುಭಾವ. ಮೊದಲನೆಯ ಪ್ರಮಾಣದಿಂದ ಭಕ್ತಿಯೆಂಬ ಹೂಳಿಟ್ಟ ದ್ರವ್ಯ ನೋಡಲು ಸಾಧನ (ಪ್ರಮಾಣ). ಎರಡನೆಯದು ಜಗ ಅಂದರೆ ಗತಿರೂಪದ ಸಂಸಾರ ವೆಂಬ ರೋಗಿಗೆ ಔಷಧ. ಅಲ್ಲಿ ಪರಿಶೀಲಿಸಬೇಕಾದ ವಿಷಯವೆಂದರೆ ಅನು ಭಾವ ಎಂಬ ಪದದ ಅರ್ಥ. ಆದುದರಿಂದ ಎರಡನೇಯದು ಪ್ರಮಾಣವಾಗ ಬೇಕಾದರೆ ಅದರ ಅರ್ಥವೇನೆಂಬ ನಿರ್ಣಯಕ್ಕೆ ಬರಬೇಕು. ಬಸವಣ್ಣನವರು ಜಗವೈದ್ಯವಾಗಿದೆ ಶರಣರ ಅನುಭಾವ ಎಂದಾಗ ಸಂಸಾರವೆಂಬ ರೋಗಿಗೆ ಔಷಧವು ಅನುಭಾವವು ಎಂದು ಅರ್ಥವಾಗುತ್ತದೆ. ಸಂಸಾರದಿಂದ ನಾವು ಮುಕ್ತರಾಗಬೇಕಾದರೆ ಶರಣರ ಹತ್ತಿರ ಹೋಗಿ ಅವರ ಅನುಭಾವ (ಉಪ ದೇಶ) ಎಂಬ ಅಮೃತವನ್ನು ಸವಿಯಬೇಕು. ಶರಣರು ನಮ್ಮ ಹಿತಚಿಂತಕರು. ಅವರೇ ನಿಜವಾಗಿ ನಮ್ಮ ಆಪ್ತರು. ಯಾಕೆಂದರೆ ಸಂಸಾರ ರೋಗದಿಂದ ಮುಕ್ತಗೊಳಿಸುವವರು. ಈ ಹಿನ್ನೆಲೆಯಲ್ಲಿ ಶರಣರ ಅನುಭಾವ ಅಂದರೆ ಆಪ್ತರ ವಾಕ್ಯ (ಬೋಧೆ). 'ಶರಣರ ಸೂಳ್ನುಡಿಯನೊಂದರಗಳಿಗೆ ಇತ್ತೆಡೆ ನಿನ್ನನಿತ್ತೆ ಕಾಣಾ ರಾಮನಾಥಾ' ಎಂಬ ದೇವರ ದಾಸಿಮಾರ್ಯರ ಮಾತು ಇದನ್ನು ಸಮರ್ಥಿಸುತ್ತದೆ. ಆದುದರಿಂದ ಅನುಭಾವವೆಂದರೆ ಆಪ್ತವಾಕ್ಯ. ಇದನ್ನು ಶಬ್ದ ಪ್ರಮಾಣವೆಂದು ಹೆಸರಿಸಿದ್ದಾರೆ. ಇಲ್ಲಿ ಇದು ಬಳಕೆಯಿಂದ ನಿಷ್ಪನ್ನವಾದ ಅರ್ಥ.

೩. ಬಸವಣ್ಣನವರು ಬೇರೊಂದು ವಚನದಲ್ಲಿ ಅನುಭಾವ ಶಬ್ದವನ್ನು ಬಳಸಿದ್ದಾರೆ. ಅದು ಪ್ರಮಾಣ ಶಾಸ್ತ್ರದ ದೃಷ್ಟಿಯಿಂದ ಬಹು ಮಹತ್ವದ ವಸ್ತುವನ್ನು ಒದಗಿಸುತ್ತದೆ. ಆ ವಚನವು ಇಂತಿದೆ :

"ಶಬ್ದ ಸುಖಕ್ಕೆ ಮಚ್ಚಿ, ಮಾತಿಂಗೆ ಮಾತನೆಕೊಟ್ಟು,
ಕೆಟ್ಟೆನಯ್ಯಾ;
ಅನುಭಾವ ಅಕ್ಕವೆಯಾಗದೆ, ಬೆಬ್ಬನೆ ಬೆಱತೆನಯ್ಯಾ......"

ಅನುಭಾವವು ಅಕ್ಕವೆಯಾಗುವುದು ಎಂದರೆ ಅನುಭಾವವು ಆಚಾರದಲ್ಲಿ ಅಭಿವ್ಯಕ್ತಗೊಳ್ಳುವುದು. ಇದೇ ಪರಿಪಕ್ವತೆ. ಇದನ್ನೇ ಅಕ್ಕವೆ ಎಂದು ಹೇಳುವುದು. ಅನುಭಾವವು ಅಕ್ಕವೆಯಾಗದೆ ಅಂದಾಗ ಅನುಭಾವವು (ಜ್ಞಾನವು) ಕ್ರಿಯಾರೂಪತಾಳದೆ ಎಂದು ಅರ್ಥವಾಗುತ್ತದೆ. ಅನುಭವ (ಜ್ಞಾನ) ಮತ್ತು ಆಚಾರ (ಕ್ರಿಯಾ)ಗಳೆರಡರಲ್ಲಿ ಸಾಮರಸ್ಯವಿದ್ದರೇ ಮುಕ್ತಿ ಎಂಬುದು ಶಿವಶರಣರ ಪ್ರತಿಪಾದನೆ. ಅನುಭಾವ ಮತ್ತು ಆಚಾರಗಳ ಸಾಮರಸ್ಯದ ಪ್ರತಿಪಾದನೆಯೂ ಶಿವಶರಣರ ಷಟ್‌ಸ್ಥಲತತ್ವಜ್ಞಾನಕ್ಕನುಸರಿಸಿಯೆ ಇದೆ ಎಂದಾಗಲೇ ಈ ವಾದಕ್ಕೆ ಅಥವಾ ಸಿದ್ಧಾಂತಕ್ಕೆ ವಾಸ್ತವತೆ ಅಥವಾ ಸಶಾಸ್ತ್ರೀಯತೆ ಎಂದು ಕಂಡುಬರುತ್ತದೆ. ಜ್ಞಾನ ಪಕ್ವವಾಗುವದೆಂದರೆ ಜ್ಞಾನ ಮತ್ತು ಕ್ರಿಯೆಗಳಲ್ಲಿ ಸಾಮರಸ್ಯವಿರುವದೆಂದು ಅರ್ಥ. ಆದುದರಿಂದ ಅನುಭವ ಅಂದರೆ ಅರಿವು. ಕಾರಣ ಇದನ್ನು ಕೆಲವರು Ethical ನೈತಿಕ ತತ್ವಜ್ಞಾನವೆಂದು ಕರೆದುದನ್ನು ಬಸವಣ್ಣನವರನ್ನು ಮಾರ್ಟಿನ್‌ಲೂಥರನಿಗೆ ಹೋಲಿಸುವಲ್ಲಿ ಅರ್ಥಮಾಡಿಕೊಳ್ಳಬೇಕು. ಆದ್ದರಿಂದ ಇಲ್ಲಿ ಅನುಭಾವ ಅಂದರೆ ಪ್ರಮಾ ಎಂದಂತೆ. ಅರಿವಿನ ಕಾಣ್ಕೆ. ಕಾಣ್ಕೆ ಅಂದರೆ ಆಚಾರ. ಕಾಣ್ಕೆ ಇಲ್ಲದ ಅರಿವು ಶೂನ್ಯ. ಅರಿವು ಇಲ್ಲದ ಕಾಣ್ಕೆ (ಆಚಾರ) ಕುರುಡು. ಶಬ್ದ ಸುಖಕ್ಕೆ ಮೆಚ್ಚಿ. ಮಾತಿಗೆ ಮಾತು ಕೊಡುವುದೆಂದರೆ ಶೂನ್ಯಕ್ಕೆ ತಲೆವಾರನಿಕ್ಕಿದಂತೆ. ಶರಣರು 'ಶೂನ್ಯಕ್ಕೆ ತಲೆವಾರನಿಕ್ಕದಿರೊ' ಎಂದು ಎಚ್ಚರಿಸುವುದು ಎಂದರೆ ಶಬ್ದ ಸುಖದಲ್ಲಿ ಉಳಿದು ತತ್ವಸಾಮರಸ್ಯವನ್ನು ಮರೆಯಬೇಡವೆಂದಂತೆ. ಅನುಭಾವವು (ಜ್ಞಾನವು) ಆಚಾರದಲ್ಲಿ ಅಭಿವ್ಯಕ್ತವಾಗದಿದ್ದರೇನೇ ಅಹಂಕಾರವು ತಲೆದೋರುವುದು. ಅಹಂಕಾರದಿಂದ ಉಂಟಾಗುವ ಸಂಸಾರರೋಗಿಗೆ ಆಚಾರ ಸಹಿತಜ್ಞಾನದಿಂದ ಬಿಡುಗಡೆ. ಅನುಭಾವ ಅಂದರೆ ಪ್ರಮಾ.

(ಇ-೧) ಅನುಭಾವ ಶಬ್ದವು ಪ್ರಮಾ ಎಂಬ ಅರ್ಥದಲ್ಲಿ ಬಳಸಲ್ಪಟ್ಟುದು ಈಗ ಗೊತ್ತಾಯಿತು. ಇದರ ಬೇರೊಂದು ಅರ್ಥ ಛಾಯೆಯು

ಉಂಟು ಎಂಬುದು ಬಸವಣ್ಣನವರ ಇನ್ನೊಂದು ವಚನದಿಂದ ಗೊತ್ತಾಗುತ್ತದೆ. ಅವರ ವಚನವು ಇಂತಿದೆ :

ಉರಿತಾಗಿದ ಮೃಗವು ಒಂದಡಿಯನಿಡುವುದೆ ಅಯ್ಯಾ ?
ತನುವ ತಾಗಿದ ಸುಖವು ಅಗಲುವುದೆ ?
ಕೂಡಲಸಂಗನ ಶರಣರ–ಅನುಭಾವವರಿದವರ
ಮರಳಿ ಮರ್ತ್ಯರೆನ್ನಬಹುದೆ ? ೧೬

ಬಸವಣ್ಣನವರು ಈ ವಚನದಲ್ಲಿ ಬಳಸಲಾದ ಅನುಲೋಮ ಸಂಭಾಷಣಾವಾದವು ಪೂರ್ವ ಪಕ್ಷವು ಹೌದು ಹೌದುಎನ್ನುವಂತಿದೆ. ಉರಿಯು ತಾಗಿದಂಥ ಮೃಗವು ಒಂದು ಹೆಜ್ಜೆಯನ್ನು ಕೂಡ ಇಡಲಾರದೆಂಬುದು ವಾಸ್ತವ ವಿಚಾರ. ಅದೇ ರೀತಿ ತನುವಿಗೆ ಉಂಟಾದ ಸುಖದ ಅನುಭವವು (ಜ್ಞಾನವು) ತನುವಿನ ಅವಿಭಾಜ್ಯ ಭಾಗವಾಗಿ ಉಳಿಯುವುದು ಅಷ್ಟೇ ವಾಸ್ತವವಾದ ಸಂಗತಿ. ಇದರಂತೆಯೇ ಶರಣರ–ಅನುಭಾವವರಿದವರನ್ನು–ಮರಳಿ ಮರ್ತ್ಯರೆನ್ನಲಾಗದು ಎಂಬುದಕ್ಕೆ ಒಪ್ಪಬೇಕಾಗುವುದು. ಶರಣರು ಎಂದರೆ ಯಾರು ? ಎಂಬ ಪ್ರಶ್ನೆಗೆ ಉತ್ತರ ದೊರೆತರೆ ಅನುಭಾವ ಶಬ್ದದ ಅರ್ಥಛಾಯಾ ಭೇದವು ನಮಗೆ ಗೊತ್ತಾಗುತ್ತದೆ; ಅಥವಾ ಮರ್ತ್ಯರು ಯಾರು ? ಎಂಬ ಪ್ರಶ್ನೆಗೆ ಉತ್ತರ ದೊರೆತರೆ ಅನುಭಾವ ಶಬ್ದದ ಅರ್ಥಛಾಯಾ ಭೇದ ಬೋಧವಾಗುತ್ತದೆ.

ಮರ್ತ್ಯರು ಅಂದರೆ ಮರಣಕ್ಕೆ ಒಳಗಾದವರು; ಅಂದರೆ ಸಾವಿಗೆ ಒಳಗಾದವರು ಎಂದು ಅನ್ನಬಹುದೇ ಎಂದು ಕೇಳಿದಂತೆ. ಇದಕ್ಕೆ ಉತ್ತರವೆಂದರೆ ಸಾವಿಗೆ ಒಳಗಾದವರು ಎಂದು ಅನ್ನಲಾಗದು. ಹಾಗಾದರೆ ಸಾವಿಗೆ ಒಳಗಾಗದವರು ಯಾರು ? ಎಂಬ ಪ್ರಶ್ನೆಗೆ ಶರಣರು ಎಂದು ಉತ್ತರ. ಶರಣ ಮನುಷ್ಯ ಅಲ್ಲವೇ ? ಎಂಬ ಪ್ರಶ್ನೆಯು ಪುನಾ ಹುಟ್ಟುತ್ತದೆ. ಇದಕ್ಕೆ ಶರಣರು ಮಾನವರಾಗಿದ್ದರು ಒಂದು ಕಾಲದಲ್ಲಿ. ಆದರೆ ಈಗ ಅವರು ಆ ಮಾನವತೆಯಿಂದ ಅಂದರೆ ಮರ್ತ್ಯಕ್ಕೆ ಒಳಗಾಗುವ ಗುಣವನ್ನು ಕಳೆದುಕೊಂಡು ಬಿಟ್ಟುದರಿಂದ ಮೃತ್ಯುವಿನ ರಾಜ್ಯದಲ್ಲಿಲ್ಲ. ಮೃತ್ಯುವೆಂಬುದರಿಂದ ಮುಕ್ತರಾಗುವ ಬಗೆ ಹೇಗೆ ? ಎಂದರೆ ತನ್ನನ್ನು ತಾನು ಅರಿತುಕೊಳ್ಳುವುದು

ತನ್ನನ್ನು ತಾನು ಅರಿತುಕೊಂಡರೆ ಅವನು ಮರಣಾತೀತ. ಮರಣಾತೀತನಾದವನೆ ಶರಣನು. ಆದುದರಿಂದ 'ಅರಿದಡೆ ಶರಣ; ಮರೆದಡೆ ಮಾನವ' ಎಂಬ ಸಿದ್ಧಾಂತವು ಕೇಳಬರುತ್ತದೆ. ತನ್ನನ್ನು ತಾನು ಅರಿತುಕೊಳ್ಳುವ ತಂತ್ರವನ್ನು ಅಥವಾ ವಿಜ್ಞಾನವನ್ನು ಬಲ್ಲ ಮಾನವನು ಶರಣನಾಗುತ್ತಾನೆ. ತನ್ನನ್ನು ತಾನರಿವ ವಿಜ್ಞಾನವನ್ನು ಬಲ್ಲವರು ಶರಣರು ಅಥವಾ ಅನುಭಾವವರಿದವರು. ಅನುಭಾವವೆಂಬ ಶಬ್ದದಲ್ಲಿ ತನ್ನರಿವ ವಿಜ್ಞಾನವೆಂಬರ್ಥವಡಗಿದೆ. ಅನುಭಾವವು ತನ್ನನ್ನು ತಾನರಿವ ತಂತ್ರ ಅಥವ ವಿಜ್ಞಾನವಾಗಿದ್ದು ಆ ವಿಜ್ಞಾನದ ವಿಷಯು ಹಾಗೂ ಸಿದ್ಧಿಯೂ ಆಗಿರುವುದು.

ಈ ಲೇಖನದಲ್ಲಿಯ ವಿವರಣೆಯ ಸಂಕೇತವಾಗಿ ಬಳಸಲಾದ ಸ್ವರಗಳಲ್ಲಿಯ 'ಇ' ಎಂಬ ಸಂಕೇತದ ವಿವರಣೆಯಲ್ಲಿ ಬಂದ ಅನುಭಾವ ಶಬ್ದದ ಅರ್ಥಛಾಯೆಯಿಂದ 'ಇ–೧' ವಿವರಣೆಯಲ್ಲಿ ಬಳಸಲಾದ ಅನುಭಾವ ಶಬ್ದದ ಅರ್ಥಛಾಯೆಯನ್ನರಿತಾಗ ಅಹಂಕಾರವನ್ನು ನಿರಸನಗೊಳಿಸುವದಕ್ಕೆ ಸೀಮಿತವಾಗಿದೆ. ಅನುಭಾವದ (ಜ್ಞಾನದ) ಸಿದ್ಧಿಯು ಇಂಥ ಕಾರ್ಯ–ಅಂದರೆ ಅಹಂಕಾರ ನಿರಸನಕಾರ್ಯ–ಸಿದ್ಧಿಸುವಲ್ಲಿ ಪ್ರಾಪ್ತವಾಗುತ್ತದೆ. ಅನುಭಾವವು ಅಕ್ಕವೆಯಾಗದಿದ್ದಾಗ ಮಾನವನು ಬೆಬ್ಬನೆ ಬೆರೆಯುವನು. ಅನುಭಾವವು ಅಕ್ಕವೆಯಾದಾಗ ಮಾನವನು ಬೆಬ್ಬನೆ ಬೆರೆಯಲಾರನು. ಈ ಬಗೆಯ ವಿಶಿಷ್ಟ ಜ್ಞಾನವೆಂಬ ಅರ್ಥಛಾಯೆ ವಿವರಣೆ 'ಇ'ದಲ್ಲಿ ಅನುಭಾವ ಶಬ್ದದ ಅರ್ಥಛಾಯೆ ಇ–೧ ವಿವರಣೆಯಲ್ಲಿಯ ಅನುಭಾವ ಶಬ್ದದ ಅರ್ಥ ಛಾಯೆಯಿಂದ ಹೇಗೆ ಭಿನ್ನವಾಗಿರುತ್ತದೆ ಎಂಬುದನ್ನು ನೋಡಬೇಕು.

'ಇ—೧' ವಿವರಣೆಯಲ್ಲಿ ಬರುವ ಅನುಭಾವ ಶಬ್ದದ ಅರ್ಥಛಾಯೆಯನ್ನು ಅರಿತುಕೊಳ್ಳಲು ಗ್ರೀಕ ಹಾಗೂ ಭಾರತೀಯ ಸುಪ್ರಸಿದ್ಧ ಸೈದ್ಧಾಂತಿಕ ಮಾತುಗಳೆರಡನ್ನು ಉದ್ಧರಿಸಿ ಪರಿಶೀಲಿಸಬೇಕು. ಗ್ರೀಕರದು 'know thy–self' ಎಂಬುದು ಸುಪ್ರಸಿದ್ಧ ಸಿದ್ಧಾಂತ. ಅದೇ ರೀತಿ ಭಾರತೀಯರದು 'ಆತ್ಮಾನಂ ಆತ್ಮನಾ ಪಶ್ಯ' ಎಂಬುದು ಸುಪ್ರಸಿದ್ಧ. ಮಾಕ್ಸಮುಲ್ಲರ ಎಂಬ ವೈದಿಕ ಪಂಡಿತನು ಇವೆರಡು ಮಾತುಗಳನ್ನು ಉದ್ಧರಿಸಿ ಹೀಗೆ ವಿವರಿಸುತ್ತಾನೆ The Samskrt, 'atmanam atmanapasya' ''See (thyself(

self by (thy) self'', had a deeper signification than the Greek ''to know thyself'', because it has not only a moral, but also a metaphysical meaning.[೧೭] ಗ್ರೀಕ ಹಾಗೂ ಭಾರತೀಯ ವಿಚಾರಗಳಲ್ಲಿ ಹುದುಗಿರುವ ವಿಚಾರದ ಅಂತರವು ಪಾಶ್ಚಿಮಾತ್ಯ ತತ್ವಜ್ಞಾನ ವಿದ್ಯಾರ್ಥಿಗಳಿಗೆ ಸುಲಭದರಲ್ಲಿ ತಿಳಿಯದಿರುವಂತೆ ಭಾರತೀಯರಲ್ಲಿ ಹಲವರಿಗೆ ಸುಲಭದರಲ್ಲಿ ತಿಳಿಯದಿರುವುದು ಸಾಧ್ಯವಿರುತ್ತದೆ. ಗ್ರೀಕರ ಸಿದ್ಧಾಂತವು ನೈತಿಕ ಆತ್ಮ (moral self)ದ ಅರಿವಿಗೆ ಮಾತ್ರ ಸೀಮಿತ. ಅವರ ಆಚೆಗೆ ಇರುವ ಇನ್ನೂ ಉಪರಿಯಾದ ಆತ್ಮವಿಚಾರ ಗ್ರೀಕ ಸಿದ್ಧಾಂತದಿಂದ ಹೊರಡುವದಿಲ್ಲ. ಆದರೆ ಭಾರತೀಯರ ಸಿದ್ಧಾಂತದಿಂದ ನೈತಿಕ ಆತ್ಮವಿಚಾರವಲ್ಲದೆ ಆಧ್ಯಾತ್ಮಿಕ ಆತ್ಮ (metaphysical self) ವಿಚಾರವು ಹೊರಡುತ್ತದೆ. ಆದ್ದರಿಂದ ಗ್ರೀಕರ ವಿಚಾರ ಅಥವಾ ಜ್ಞಾನದಿಂದ ಉಪರಿಯಾದ ಜ್ಞಾನವು ಭಾರತೀಯರದು. ಇದು ಇವೆರಡು ಸಿದ್ಧಾಂತಗಳ ವಿಶ್ಲೇಷಣೆಯಿಂದ ಕಂಡುಬರುವ ಜ್ಞಾನಶಬ್ದದ ಅರ್ಥಛಾಯಾಂತರವು.

ಇದೇ ಪ್ರಕಾರ ವಿವರಣೆ 'ಇ'ಯಲ್ಲಿ ಬಳಸಲಾದ ವಚನದಲ್ಲಿ ಬಂದ ಅನುಭಾವ ಶಬ್ದವು ಗ್ರೀಕರ 'know thyself' ಎಂಬ ಸಿದ್ಧಾಂತ ವಿವರಣೆಯಿಂದ ನಿಷ್ಪನ್ನವಾದ ಅರ್ಥಕೊಡುತ್ತದೆ; ಹಾಗೂ 'ಇ-೧' ವಿವರಣೆಯಲ್ಲಿ ಬಳಸಲಾದ ವಚನದಲ್ಲಿ ಬರುವ ಅನುಭಾವ ಶಬ್ದವು ಭಾರತೀಯರ 'ಆತ್ಮಾನಂ ಆತ್ಮನಾ ಪಶ್ಯ' ಎಂಬ ಸಿದ್ಧಾಂತ ವಿವರಣೆಯಿಂದ ನಿಷ್ಪನ್ನವಾದ ಅರ್ಥವನ್ನು ಕೊಡುತ್ತದೆ. ಅನುಭಾವ ಶಬ್ದವನ್ನು ಬಳಸಲಾಗಿರುವದರಿಂದ ಉಂಟಾದ ಅರ್ಥವ್ಯತ್ಯಾಸವು ನಮಗೀಗ ಖಚಿತವಾದಂತೆ ಎರಡನೆಯ ಅರ್ಥವು ಮೊದಲನೆಯ ಅರ್ಥದಿಂದಲೂ ಉಪರಿಯಾದುದೆಂಬುದೂ ಖಚಿತವು. ಈ ಅರ್ಥಛಾಯಾ ನಿರ್ಣಯದಿಂದ ಅನುಭಾವ ಶಬ್ದದ ಮಹೋನ್ನತ ಅರ್ಥವು ಗೊತ್ತಾಯಿತು. ಭಾರತೀಯ ದರ್ಶನದಲ್ಲಿ ವಚನಕಾರರು ಅನುಭಾವ ಶಬ್ದವನ್ನು ಬಳಸಿದ ಹೊಸ ಚಿತ್ರವು ದೊರೆಯಿತು.

ಅನುಭಾವ ಎಂದರೆ ಉಪಾಯ (ಪ್ರಮಾಣ) ಮತ್ತು ಸಿದ್ಧಿ ಅಥವಾ ಸಾಕ್ಷಾತ್ಕಾರ-ಪ್ರಮಾ ಎಂಬ ಅರ್ಥಗಳುಂಟು ಎಂದು ಇದರಿಂದ ಗೊತ್ತಾಗು

ತ್ತದೆ. ಕಾರಣ ಅನುಭಾವ ಅಂದರೆ ಪ್ರಮಾಣ ಮತ್ತು ಪ್ರಮಾ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ನಾನೆಂಬುದು ಪ್ರಮಾಣವೆಂಬ ಅಲ್ಲಮಪ್ರಭುವಿನ ಮಾತು ಇಲ್ಲಿ ಸಂಸ್ಮರಣೀಯವಾಗಿದೆ. ಇದೇ ಆಭಾಸವಾಗುವಂಥ, ಇದೇ ಧೋರಣೆಯನ್ನು ಸೂಚಿಸುವಂಥ ಮಾತೊಂದನ್ನು ಡೈಕಾರ್ಟನೆಂಬ ಪಾಶ್ಚಿಮಾತ್ಯ ತತ್ವಜ್ಞಾನಿಯು ಹೇಳಿ ಪಾಶ್ಚಿಮಾತ್ಯರ ಪ್ರಮಾಣ ಸಿದ್ಧಾಂತ (Theory of Epistemology)ದಲ್ಲಿ ಕ್ರಾಂತಿಯನ್ನು, ಹೊಸ ಸ್ವರೂಪವನ್ನು ಸೃಷ್ಟಿಮಾಡಿದನು. ಅವನ ಸಿದ್ಧಾಂತವು: ಇದರ ಪ್ರಕಾರ, ನಾನು ಎಂಬುದು ಪ್ರಮಾಣ ಮತ್ತು ಪ್ರಮಾ. ಪ್ರಭುದೇವರು ಹೇಳುವ 'ನಾನು' ಮತ್ತು ಡೈಕಾರ್ಟನು ಹೇಳುವ 'ನಾನು' ಎಂಬುದು ಒಂದೇ ಎಂದು ಯಾರೂ ಭಾವಿಸಲಾಗದು. ಈ ಭಿನ್ನತೆಯು 'ಪ್ರಮಾ'ದ ಅರ್ಥಛಾಯೆಯಲ್ಲಿಯ ಭಿನ್ನತೆಗೆ ಕಾರಣವಾಗುತ್ತದೆ ಎಂಬುದನ್ನು ಸೂಚಿಸಿದರೆ ಸಾಕು. ವಚನಕಾರರಲ್ಲಿ ಅನುಭಾವ ಎಂಬುದು ಜ್ಞಾನಸಿದ್ಧಾಂತದ ಮೂಲ ಮಂತ್ರವೆಂದು ತೋರುತ್ತದೆ. ಇದನ್ನು ಆಧರಿಸಿ ವಚನಕಾರರು ಜ್ಞಾನಸಿದ್ಧಾಂತವನ್ನು ಷಟ್‌ಸ್ಥಲ ಎಂದು ಹೆಸರಿಸಿದ್ದಾರೆ. ಅದನ್ನು ವ್ಯವಸ್ಥಿತರೀತಿಯಲ್ಲಿ ಸಶಾಸ್ತ್ರೀಯವಾಗಿ ಪುನರ್ರಚಿಸುವುದು ವೀರಶೈವ ಸಾಹಿತ್ಯ ತಜ್ಞರಿಗೆ ಒಂದು ಸವಾಲಾಗಿದೆ.

ಈ. ತೋಂಟದ ಸಿದ್ಧಲಿಂಗ ಎಂಬ ಹೆಸರಿನವರು ತೋಂಟದಾರ್ಯಮಠದ ಪರಂಪರೆಯಲ್ಲಿ ಸುಪ್ರಸಿದ್ಧರು. ಅವರಲ್ಲಿ ಒಬ್ಬರು ವಚನಕಾರರು. ಇನ್ನೊಬ್ಬರು ಷಟ್‌ಸ್ಥಲ ಕೌಮುದಿ ಎಂಬ ಗ್ರಂಥವನ್ನು ಬರೆದವರು. ಇವರಲ್ಲಿ ಒಬ್ಬರು ಅನುಭಾವ ಶಬ್ದ ನಿಷ್ಪತ್ತಿಯನ್ನು ಮಾಡಿದ್ದಾರೆ ಎಂದು ತಿಳಿದುಬರುತ್ತದೆ. ಅವರು ಬರೆದ ನಿರುಕ್ತಿಯನ್ನು 'ಶಿವಾನುಭವ ಶಾಸ್ತ್ರವು' ಎಂಬ ಪುಸ್ತಕದ ಮುನ್ನುಡಿಯಲ್ಲಿ ಉದ್ಧರಿಸಲಾಗಿದ್ದು, ಅದನ್ನಿಲ್ಲಿ ಉದ್ಧರಿಸಲಾಗಿದೆ.

ಅಕಾರೋ ಲಿಂಗಮೇವೋಕ್ತಂ ನುಕಾರೋ ಜೀವ ಉಚ್ಯತೇ ।
ಭಾವಸ್ಸಂಯೋಗ ಏವೋಕ್ತೋ ಅನುಭಾವೋ ನಿಗದ್ಯತೆ ॥೧೮

ಅನುಭಾವನೆಂದರೆ ಶಿವ (ಲಿಂಗ) ಮತ್ತು ಜೀವ (ಅಂಗ)ರ ಸಾಮರಸ್ಯ ಸೂಚಿ

ಸುವ ಪದವು. ಅನುಭಾವ ಶಬ್ದದಲ್ಲಿಯ ಅ ಎಂಬುದು ಲಿಂಗ ಪ್ರತಿಪಾದಕವು; ನು ಎಂಬುದು ಅಂಗ ಪ್ರತಿಪಾದಕವು. ಭಾವ ಎಂಬುದು ಲಿಂಗ ಮತ್ತು ಅಂಗ ಗಳೆರಡೂ ತತ್ವಗಳನ್ನು ಒಂದುಗೊಳಿಸುವ ಸಾಧನವಾಗಿರುತ್ತದೆ. ಕಾರಣ ಭಾವ ಅಂದರೆ ಯೋಗ ಎಂಬುದರ ಸರಿಯಾದ ಪರ್ಯಾಯ ಪದವಾಗಿರುತ್ತದೆ ಯೆಂದು ತೋರುತ್ತದೆ. ಇದರಿಂದ ತಿಳಿಯುವದೇನೆಂದರೆ ಅನುಭಾವವೆಂದರೆ ಶಿವ ಮತ್ತು ಜೀವದ ಯೋಗ ಅಥವಾ ಶಿವಯೋಗ. ಅನುಭಾವ ಮತ್ತು ಶಿವ ಯೋಗ ಎಂಬವು ಪರ್ಯಾಯ ಪದಗಳೆಂಬುದು ಈಗ ಸ್ಪಷ್ಟವಾಯಿತು.

ನಾವು ಭಾರತೀಯ ಆಸ್ತಿಕ ಮತ್ತು ನಾಸ್ತಿಕ ದರ್ಶನಗಳನ್ನು ತೆಗೆದು ಕೊಂಡರೆ ನಾಸ್ತಿಕ ದರ್ಶನದಲ್ಲಿ ಚಾರ್ವಾಕವನ್ನುಳಿದು ಬಹುತೇಕ ದರ್ಶನಗಳು ಯೋಗವನ್ನು ಒಂದು ಪ್ರಮಾಣವೆಂದು ಬಳಸಿಕೊಂಡಿವೆ. ಯೋಗೀಪ್ರತ್ಯಕ್ಷ, ಯೋಗಜ ಪ್ರತ್ಯಕ್ಷ ಮುಂತಾಗಿ ಬಳಸಿರುವುದು ಹಾಗೂ ಅದನ್ನು ಅಲೌಕಿಕ ಪ್ರತ್ಯಕ್ಷವೆಂದು ಕೆಲವರು ಇಂದ್ರಿಯ ಪ್ರತ್ಯಕ್ಷದಿಂದ ಬೇರೆ ಮಾಡಿ ತೋರಿಸಲು ಹೆಸರಿಸಿದರೆ, ಇಂದ್ರಿಯ ಪ್ರತ್ಯಕ್ಷವು ಪರೋಕ್ಷವೆಂದೂ ಯೋಗಜ ಪ್ರತ್ಯಕ್ಷವು ಪ್ರತ್ಯಕ್ಷವೆಂದೂ ಹೆಸರಿಸಿ ಈ ಪ್ರಮಾಣದ ವೈಶಿಷ್ಟ್ಯ ಹಾಗೂ ಮಹತ್ವವನ್ನು ಮೆರೆದಿದ್ದಾರೆ ಪ್ರಮಾಣಶಾಸ್ತ್ರ ಕೋವಿದರು. ಇದೇ ಪ್ರಕಾರ ವೀರಶೈವ ಪಂಡಿ ತರು ವಚನಕಾರರು ಯೋಗವನ್ನು ಪ್ರಮಾಣವೆಂದು ಬಳಸಿದ್ದಾರೆ. ಅನುಭಾವ ಎಂಬುದು ಯೋಗ ಎಂಬರ್ಥದಲ್ಲಿ ಪ್ರಮಾಣವಾಗಿದೆಯೆಂದು ಇದರಿಂದ ಸಿದ್ಧ ವಾಗುತ್ತದೆ.

## ವಚನಧರ್ಮ ತತ್ವಶಾಸ್ತ್ರ ಮತ್ತು ಅನುಭಾವ :

ವಚನಶಾಸ್ತ್ರ ಪ್ರವೀಣರಾದ ಚನ್ನಬಸವಣ್ಣನವರು ಷಟ್‌ಸ್ಥಲ ಚಕ್ರ ವರ್ತಿಯೆಂದು ಸುಪ್ರಸಿದ್ಧರು. ಅವರು ಅನುಭಾವ ಎಂಬ ಪದವನ್ನು ಅತ್ಯಂತ ವೈವಿಧ್ಯಾರ್ಥದಲ್ಲಿ ಬಳಸಿದ್ದಾರೆ. ಈ ಪ್ರಯೋಗವು ಪ್ರಮಾಣ ವಿಚಾರದಲ್ಲಿ ಅವರಿಗಿರುವ ಪ್ರಾವೀಣ್ಯವನ್ನು ತೋರಿಸುತ್ತದೆ. ಪ್ರಮಾಣಶಾಸ್ತ್ರದ ವೈವಿಧ್ಯ ಮಯವಾದ ಬೆಳವಣಿಗೆ, ಪ್ರಯೋಜನಗಳ ಪರಿಚಯವು ವಚನಾರ್ಥಮಾಡಿ ಕೊಳ್ಳಲು ತುಂಬ ಸಹಾಯಕಾರಿಯಾಗಿರುತ್ತದೆ. ಈ ವಚನವು ಇಂತಿದೆ:

ಅನುಭಾವವಿಲ್ಲದವನ ಭಕ್ತಿ ಅನುವಿಂಗೆ ಬಾರದು.
ಅನುಭಾವವಿಲ್ಲದ ಲಿಂಗ ಸಮರಸ ಸುಖವನೀಯದು.
ಅನುಭಾವವಿಲ್ಲದ ಪ್ರಸಾದ ಪರಿಣಾಮ ಕೊಡದು.
ಅನುಭಾವವಿಲ್ಲದೆ ಅರಿಯಬಾರದು.
ತನ್ನಲ್ಲಿ ತಾನು ಸನ್ನಿಹಿತವುಳ್ಳರೆ ಶಿವಶರಣರ ಸಂಗವೇತಕೆನಲುಂಟೆ
ಕೂಡಲ ಚನ್ನಸಂಗಯ್ಯಾ, ನಿಮ್ಮ ಅನುಭಾವವು ಮಾತಿನ
ಮಥನವೆನಬಹುದೆ ?

## ೧. ಅನುಭಾವವಿಲ್ಲದವನ ಭಕ್ತಿ ಅನುವಿಂಗೆ ಬಾರದು.

ಭಕ್ತಿಯನ್ನು ಆಚರಿಸುವುದು ಅನುವಿಂಗೆ ಸಲ್ಲುವುದಕ್ಕಾಗಿ. ಭಕ್ತಿಯು
ಅನುವನ್ನು (ಲಿಂಗವನ್ನು) ಕುರಿತೇ ಇರುತ್ತದೆ. ಲಿಂಗಕ್ಕೆ (ಅಂದರೆ ಅನುವಿಗೆ)
ಅರ್ಪಿತವಾಗಬೇಕಾದಂಥ ಭಕ್ತಿಯು ಅನುಭಾವಯುಕ್ತವಾಗಿರಬೇಕು. ಅನು
ಭಾವ ಯುಕ್ತವಾಗಿರಬೇಕು ಎಂದರೆ ಏನು ಎಂಬುದನ್ನು ಅರಿತುಕೊಳ್ಳಬೇಕಾ
ದರೆ ಭಕ್ತಿಯ ಹಸಿಗೆಯನ್ನು ಮಾಡಬೇಕಾಗುತ್ತದೆ. ವಚನಶಾಸ್ತ್ರದಂತೆ, ಇನ್ನು
ಳಿದ ಕನ್ನಡ ಹಾಗೂ ಸಂಸ್ಕೃತ ವೀರಶೈವ ಪಂಡಿತರಂತೆ, ಭಕ್ತಿಯು ಜ್ಞಾನೋ
ತ್ತರವಾಗಿರುತ್ತದೆ; ಅಥವಾ ಜ್ಞಾನರಹಿತವಾಗಿರುತ್ತದೆ. "ನಾಸ್ತಿಕವಾಡಿಹರೆಂದು
ನಾಚಲದೇಕೆ ?" ಎಂಬ ಬಸವಣ್ಣನವರ ಮಾತು ಭಕ್ತಿಯನಾಚರಿಸುವ ಎರಡು
ವಿಧಾನಗಳನ್ನು ಅಂದರೆ ಶಾಸ್ತ್ರೋಕ್ತ ಭಕ್ತಿಯಾಚರಣೆ, ಶಾಸ್ತ್ರದ ಜ್ಞಾನವಿಲ್ಲ
ದಲೆ ಭಕ್ತಿಯನ್ನು ಆಚರಿಸುವುದು ಎಂಬುದನ್ನು ತಿಳಿಸುತ್ತದೆ. ಇದೇ ಜ್ಞಾನ
ಯುಕ್ತಭಕ್ತಿ, ಜ್ಞಾನರಹಿತಭಕ್ತಿ ಎಂದು ಹೇಳುವುದು. ಕೊನೆಯದನ್ನು
ಬಸವಣ್ಣನವರು ಎತ್ತಿತೋರಿಸಲು ಕುರಿಯ ಹಿಕ್ಕೆಯನ್ನು ಲಿಂಗವೆಂದು ಪೂಜಿ
ಸುವುದು, ಬೇಡರ ಕಣ್ಣಪ್ಪನು ಪೂಜಿಸುವುದು ಮುಂತಾದವುಗಳ ಆಚರಣೆಯು
ಆದಾವ ಆಗಮ ? ಎಂದು ಪ್ರಶ್ನಿಸಿ ಜ್ಞಾನರಹಿತ ಭಕ್ತಿಯ ಸಿದ್ಧಿಯನ್ನು ಎತ್ತಿ
ತೋರಿಸಿದ್ದಾರೆ. ಜ್ಞಾನೋತ್ತರಭಕ್ತಿಯಾಗಿರಲಿ, ಜ್ಞಾನರಹಿತ ಭಕ್ತಿಯಾಗಿರಲಿ
ಇವೆರಡು ಭಕ್ತಿಗಳಲ್ಲಿ ಸಾಮಾನ್ಯ ತತ್ವವೊಂದಿದ್ದು ಅದು ಇಲ್ಲದಿದ್ದರೆ ಭಕ್ತಿ
ಯೆಂಬ ಹೆಸರಿಗೆ ಅರ್ಥವೇ ಉಳಿಯಲಾರದು. ಆ ಮೂಲ ತತ್ವವಾವುದು

ಇವೆರಡೂ ಭಕ್ತಿಗಳು ದೇವರಿಗೆ (ಅನುವಿಂಗೆ) ಸಲ್ಲಬೇಕಾದರೆ ? ಎಂಬ ಪ್ರಶ್ನೆಗೆ ಉತ್ತರ ಈಗ ಬೇಕು.

ದೇವರಿಗೆ ಸಲ್ಲಬೇಕಾದರೆ ಭಕ್ತಿಯು–ಜ್ಞಾನೋತ್ತರ ಭಕ್ತಿಯು ಮತ್ತು ಜ್ಞಾನ ರಹಿತಭಕ್ತಿಯು–ಶ್ರದ್ಧಾಯುಕ್ತವಾಗಿರಬೇಕು. ಇಲ್ಲವಾದರೆ ಶ್ರದ್ಧೆಯಿಲ್ಲದ ಭಕ್ತಿಯು ಅನುವಿಂಗೆ ಬಾರದು, ಎಂದು ಒಪ್ಪಬೇಕಾಗುತ್ತದೆ. ಶ್ರದ್ಧೆ (Faith)ಯು ಎಲ್ಲ ಜ್ಞಾನಗಳಿಗೂ ಪಿತೃ. ಅದೇ ರೀತಿ ಎಲ್ಲ ಭಕ್ತಿಗಳಿಗೂ ಪಿತೃ. ಶ್ರದ್ಧೆಯಿಲ್ಲದ ಭಕ್ತಿ ಅನುವಿಂಗೆ ಬಾರದು ಎಂಬುದೇ ಅನುಭಾವವಿಲ್ಲದ ಭಕ್ತಿ ಅನುವಿಂಗೆ ಬಾರದು ಎಂದು. ಈ ಸಂದರ್ಭದಲ್ಲಿ ಅನುಭಾವ ಎಂದರೆ ಜ್ಞಾನ ಎಂದು ಅರ್ಥಮಾಡಿದರೆ ಭಕ್ತಿಯ ವ್ಯಾಖ್ಯೆಯು ಸಂಕುಚಿತವಾಗುವುದು ಯಾಕಂದರೆ ಜ್ಞಾನೋತ್ತರವಲ್ಲದ ಭಕ್ತಿಯೂ ಒಂದು ಇದ್ದು ಆ ಭಕ್ತಿಯನ್ನು ಭಕ್ತಿಯ ಅರ್ಥವ್ಯಾಪ್ತಿಯಲ್ಲಿ ಅದು ಇಲ್ಲವೆಂದು ತೋರಿಸಿಕೊಟ್ಟಂತಾಗುತ್ತದೆ. ಅಂಥ ಭಕ್ತಿಯನ್ನು ಅಲ್ಲಗಳೆದಂತಾಗುತ್ತದೆ. ಅರ್ಥ ಅವ್ಯಾಪ್ತಿದೋಷವುಂಟಾಗುವುದೆಂಬುದು ಇದರಿಂದ ಖಚಿತವಾಗುತ್ತದೆ. ಆದುದರಿಂದ ಅನುಭಾವ ಯುಕ್ತ ಎಂಬುದು ಕೇವಲ ಜ್ಞಾನಯುಕ್ತ ಎಂಬರ್ಥಮಾಡುವದು ಅಹಿತಕಾರಿ, ಶ್ರದ್ಧಾಯುಕ್ತ ಎಂಬರ್ಥವು ಅನುಭಾವಯುಕ್ತ ಎಂಬ ಪೂರ್ಣ ಅರ್ಥಕೊಟ್ಟು ಅರ್ಥವ್ಯಾಪ್ತಿಯು ದೋಷದಿಂದ ಮುಕ್ತಗೊಳಿಸ್ತುದೆ. ಕಾರಣ ಅನುಭಾವ ವಿಲ್ಲದ ಭಕ್ತಿ ಅಂದರೆ ಶ್ರದ್ಧೆಯಿಲ್ಲದ ಭಕ್ತಿಯೆಂದೇ ಅರ್ಥವಾಗುತ್ತದೆ. ಆದ್ದರಿಂದ ಅನುಭಾವ ಅಂದರೆ ಶ್ರದ್ಧೆ.

## ೨. ಅನುಭಾವವಿಲ್ಲದ ಲಿಂಗ ಸಮರಸ ಸುಖವನೀಯದು :

'ಅನುಭಾವವಿಲ್ಲದ ಲಿಂಗ ಸಮರಸ ಸುಖವನೀಯದು' ಎಂಬುದನ್ನು ವಾಕ್ಯ ರಚನೆಯ ದೃಷ್ಟಿಯಿಂದ ಪರಿಶೀಲಿಸಬೇಕು. ಈಯದು ಎಂಬುದು ನಿಷೇದಾರ್ಥಕ ಕ್ರಿಯಾಪದವು. ಇದು ಸಕರ್ಮಕ ಕ್ರಿಯಾಪದವು. ಕರ್ಮವು, ಇಲ್ಲಿ ಸಮರಸ ಸುಖವೆಂಬುದು. ಯಾವದು ಈಯದು ? ಎಂಬ ಪ್ರಶ್ನೆಗೆ ಲಿಂಗವು ಈಯದು ಎಂಬ ಉತ್ತರವು ಬರುತ್ತದೆ. ಯಾರಿಗೆ ? ಅಂದರೆ ಭಕ್ತನಿಗೆ ಎಂಬುದು ಗುಪ್ತವಿದೆ. ಲಿಂಗವು ಕರ್ತೃ, ಸಮರಸ ಸುಖ ಎಂಬುದು

ಕರ್ಮ. ಈಯುದು ನಿಷೇದಾರ್ಥಕ ಸಕರ್ಮಕ ಕ್ರಿಯಾಪದವು. ಎಂಥ ಲಿಂಗವು ಈಯುದು ? ಅನುಭಾವವಿಲ್ಲದ ಎಂಬುದು ವಿಶೇಷಣ. ಇದು ಲಿಂಗ ವನ್ನು ವರ್ಣಿಸುತ್ತದೆ. ಈ ದೃಷ್ಟಿಯಿಂದ ಪರಿಶೀಲಿಸಿದಾಗ ಲಿಂಗವು ಅನು ಭಾವ ವಿಹೀನವಾದುದಾಗಿದ್ದರೆ ಅದು ಸಮರಸ ಸುಖ ಕೊಡಲಾರದು ಎಂಬುದು ಸಿದ್ಧವಾಗುತ್ತದೆ. ಇದರ ವಿರುದ್ಧವಾದ ಅರ್ಥವನ್ನು ಕೊಡುವ ವಾಕ್ಯವನ್ನು ಹೀಗೆ ಬರೆಯುಬಹುದು—'ಅನುಭಾವವಿರುವ ಲಿಂಗ ಸಮರಸ ಸುಖವನ್ನೀಯುವದು'. ಸಮರಸ ಸುಖವನ್ನು ಲಿಂಗವು ಕೊಡಬೇಕಾದರೆ ಅದು ಅನುಭಾವಯುಕ್ತವಿರಬೇಕು ಎಂದು ಅರ್ಥವಾಗುತ್ತದೆ. ಅನುಭಾವ ಎಂದರೆ ಸಕ್ರಿಯ ಸಾಮರ್ಥ್ಯ. ಭಕ್ತನು ಅಪೇಕ್ಷಿಸುವ ಸಮರಸ ಸುಖ ಅಪೇಕ್ಷೆಗೆ ಪ್ರತಿಯಾಗಿ ಸಮರಸ ಸುಖ ತೃಪ್ತಿಗೊಳಿಸುವ ಶಕ್ತಿಯು ಅನುಭವ ಎಂದಂತಾಯಿತು. ಇಂಥ ಅಪೇಕ್ಷೆಯನ್ನು ಪೂರೈಸುವ ಶಕ್ತಿ ಅಥವಾ ಗುಣ ವುಳ್ಳ ದೇವರು ಅನುಭಾವವುಳ್ಳವನು. ಅದೇ ರೀತಿ ಭಕ್ತನು ಬಯಸುವ ಸಮರಸ ಸುಖವನ್ನು ಕೊಡದಿರುವ ದೇವರು ಅನುಭಾವವಿಲ್ಲದವನು ಅಥವಾ ಶಕ್ತಿಹೀನನು. ಇದನ್ನೇ ನಾವು ವಿಶಿಷ್ಟ ಗುಣವುಳ್ಳ ದೇವರು ಸಮರಸ ಸುಖ ಕೊಡುವನು ಎಂದು ಹೇಳಬಹುದು. ಇವನು ಸಗುಣ ಬ್ರಹ್ಮ ಇಲ್ಲವೆ ಗುಣವಿಶಿಷ್ಟ ಬ್ರಹ್ಮ. ಆದುದರಿಂದ ಅನುಭಾವ ಅಂದರೆ ಶಕ್ತಿ ವಿಶಿಷ್ಟ ಅಥವ ಗುಣ ವಿಶಿಷ್ಟವೆಂದು ಅರ್ಥವಾಗುತ್ತದೆ.

'ಅನುಭಾವ' ಅಂದರೆ ಜ್ಞಾನ ಎಂದು ಇಟ್ಟುಕೊಂಡು ಜ್ಞಾನವಿಲ್ಲದ ಲಿಂಗ ಅನ್ನುವ ಬದಲು ಜ್ಞಾನವಿಲ್ಲದ ವ್ಯಕ್ತಿ ಅಥವಾ ಭಕ್ತ ಎಂದದ್ದಾದರೆ, ಅಂಥವನಿಗೆ ಲಿಂಗವು ಸಮರಸ ಸುಖ ಕೊಡುವದಿಲ್ಲ ಎಂದು ಅರ್ಥ ವಾಗುತ್ತದೆ. ಆದರೆ ಅಜ್ಞರಾದಂಥವರು ಅನೇಕರು ಲಿಂಗದೊಡನೆ ಸಮರಸ ಸುಖವನ್ನು ಹೊಂದಿರುವರು ಎಂಬುದು ಸುಪ್ರಸಿದ್ಧ. ಕಾರಣ ಅನುಭಾವವಿಲ್ಲದ ಎಂಬ ಪದವನ್ನು ಜ್ಞಾನವಿಲ್ಲದ ಎಂದು ಭಕ್ತನಿಗೆ ಅನ್ವಯಿಸುವುದರಿಂದ ಅರ್ಥದೋಷವಾಗುತ್ತದೆ. ಇದರಿಂದ ಅನುಭಾವವಿಲ್ಲದ ಎಂಬ ಪದವು ಭಕ್ತನಿಗೆ ಅನ್ವಯವಾಗದೆ ಲಿಂಗಕ್ಕೇ ಅನ್ವಯ ವಾಗುವುದೆಂದು ಖಚಿತವಾಗುತ್ತದೆ. ವಚನಕಾರ ಚನ್ನಬಸವಣ್ಣನವರು ಸಮ

ರಸ ಸುಖವನ್ನು ಬಯಸುವ ಭಕ್ತನು ಅನುಭಾವವಿಹೀನ-ಗುಣವಿಹೀನ-ಲಿಂಗ ದಲ್ಲಿ ಸಮರಸ ಸುಖವನ್ನು ಬಯಸುವದರಲ್ಲಿ ಅರ್ಥವಿಲ್ಲವೆಂಬ ವಿಚಾರವನ್ನು ತಿಳಿಯಪಡಿಸುವ ಉದ್ದೇಶವುಳ್ಳವರಾಗಿದ್ದಾರೆಂದು ಸ್ಪಷ್ಟವಾಗುತ್ತದೆ. ಆದುದ ರಿಂದ ಅನುಭಾವ ಅಂದರೆ ಸಗುಣ ಅಥವ ಶಕ್ತಿವಿಶಿಷ್ಟ.

ಇನ್ನೊಂದು ರೀತಿಯಿಂದ ಆಲೋಚಿಸಬಹುದು. ಸಮರಸವೆಂಬ ವಸ್ತು ವನ್ನು ಕೊಡುವವನಲ್ಲಿ ಆ ಸಮರಸ ಸಂಪತ್ತು ಇರಬೇಕು. ಇಲ್ಲದಿದ್ದರೆ ಅಂಥ ಬಡವನು ಆದೆಂತು ಸಮರಸ ಸುಖವನ್ನು ಕೊಡಬಲ್ಲನು ? ಕೊಡುವ ಕಾರ್ಯವನ್ನು ಮಾಡುವವ ಲಿಂಗನು. ಇದನ್ನು ಅಂದರೆ ಸಮರಸ ಸಂಪತ್ತನ್ನು ಕೊಡುವ ಸಾಮರ್ಥ್ಯವಿದೆ ಎಂಬುದನ್ನು ಸೂಚಿಸುವ ಪದವು ಅನುಭಾವ ಎಂಬುದು. ಭಾವ ಸೂಚಕ ಪದವಾಗಿರುವ ಕಾರಣ ಕೊಡುವ ಲಿಂಗದಲ್ಲಿ ಅಭಾವವಿಲ್ಲವೆಂದು ಸ್ಪಷ್ಟವಾಗುತ್ತದೆ. ಅನುಭಾವ ಎಂಬುದು ಪುನಾ ಲಿಂಗ ಕ್ಕೆನೇ ಅನ್ವಯಿಸಿ ಕಾರ್ಯಸಾಮರ್ಥ್ಯ ಸೂಚಕವಾಗಿದೆ. ಅನುಭಾವವಿಲ್ಲದ ಲಿಂಗವೆಂದಾಗ ಶಕ್ತಿವಿಹೀನ ಲಿಂಗ ಸಮರಸ ಸುಖವನ್ನು ಭಕ್ತನಿಗೆ ಕೊಡದು ಎಂದಾಗುವುದರಿಂದ, ಅನುಭಾವ ಅಂದರೆ ಶಕ್ತಿ ಅಥವ ಸಗುಣ ಎಂಬರ್ಥ ವಾಗುತ್ತದೆ.

## ೩. ಅನುಭಾವವಿಲ್ಲದ ಪ್ರಸಾದ ಪರಿಣಾಮ ಕೊಡದು

ಪರಿಣಾಮ ಎಂಬುದು ಪಾರಿಭಾಷಿಕ ಪದವು. ಇದು ಚಿತ್ತದ ಶಾಂತ ಸ್ಥಿತಿಯನ್ನು ಅಥವ ತೃಪ್ತಿಯನ್ನು ಸೂಚಿಸುತ್ತದೆ. ಪರಿಣಾಮಲಿಂಗ ಎಂದರೆ ತೃಪ್ತಿಲಿಂಗ. ತೃಪ್ತಿಲಿಂಗ ಎಂದರೆ ಭಾವಲಿಂಗ. ಇದೇ ಆತ್ಮತೃಪ್ತಿ. ಲಿಂಗ ತೃಪ್ತಿ, ಆತ್ಮ ತೃಪ್ತಿಗಳು ವೀರಶೈವ ಅಥವ ವಚನ ಪರಿಭಾಷೆಯಲ್ಲಿ ಬೇರೆ ಬೇರೆ ಅಲ್ಲ. ಆತ್ಮ ಎಂದರೆ–ಎಂದೂ ಸಾಯದ ಚಿತ್ತು ಎಂದು ಶಿವಶರಣರು ವ್ಯಾಖ್ಯಾನಿಸಿದ್ದಾರೆ ಎಂಬುದಿಲ್ಲಿ ಸ್ಮರಣಾರ್ಹ. ಆತ್ಮತೃಪ್ತಿ ಅಥವಾ ಚಿತ್ತಪರಿ- ಣಾಮವನ್ನೈದುವ ಮಾರ್ಗಗಳಲ್ಲಿ ಪ್ರಸಾದಮುಖಾಂತರವಿರುವುದೂ ಒಂದು ಮಾರ್ಗ ಆಗಿದೆ. ಅದನ್ನು ಬಸವಣ್ಣನವರು ಬೋಧಿಸಿದ್ದಾರೆ. 'ತುತ್ತಿಗೊಮ್ಮೆ

ಶಿವಶರಣು ಎಂದರೆ ಕರಣವೃತ್ತಿಗಳು ಅಡಗುವವು' ಎಂಬುದು ಬಸವಣ್ಣನವರು ಅನುಷ್ಠಾನಮಾಡಿ ಸಂಪಾದಿಸಿದ ಸಿದ್ಧಿಯ ವಿಚಾರ. ಕರಣವೃತ್ತಿಗಳಡಗಬೇಕಾದರೆ ಪ್ರಸಾದವನ್ನು ಶಿವಶರಣು ಎಂಬ ನಾಮಸ್ಮರಣೆಯನ್ನು ಜಾಗರೂಕತೆಯಿಂದ ಆಹಾರ ಹಾಗೂ ನಾಮಸ್ಮರಣೆ ಒಂದಾಗಿ ದೇಹ ಪ್ರವೇಶಿಸಿ ರಸವು ಮಹರಸವಾಗಿ ದೈಹಿಕ, ಪ್ರಾಣಿಕ, ಮಾನಸಿಕ ಮತ್ತು ಆತ್ಮಿಕ ಅವಸ್ಥೆಗಳ ಬೆಳವಣಿಗೆಯಾಗಿ ಪರಿಣಾಮಗೊಳ್ಳಬೇಕು. ಇದು ಪ್ರಸಾದವು ಪರಿಣಾಮಗೊಳ್ಳುವ ಕ್ರಮವು. ಆದುದರಿಂದ ಅನುಭಾವವಿಲ್ಲದ ಅಂದರೆ ಶಿವನಾಮ ಸ್ಮರಣೆಯುಕ್ತವಲ್ಲದೆ ಎಂಬ ಅರ್ಥವಾಗುತ್ತದೆ. ಅನುಭಾವವು ನಾಮಜಪವಾಗಿರುವದು ಪ್ರಸಾದ ಸೇವನೆಯ ಶಾಸ್ತ್ರಕ್ಕನುಗುಣವಾಗಿರುವದು ಇಲ್ಲಿ ಮಾಡಿರುವ ವಿವರಣೆಯಿಂದ ಸಿದ್ಧವಾಗುತ್ತದೆ. ಇದು ವೀರಶೈವ ವಿಧಾನವು ಎಂಬ ವಿಚಾರವನ್ನು ಬಸವಣ್ಣನವರ ಮಾತು ದೃಢ ಪಡಿಸುತ್ತದೆಯೆಂಬುದೂ ಇಲ್ಲಿ ಗೊತ್ತಾಗುತ್ತದೆ. ಭಾವತೃಪ್ತಿ ಎಂಬ ಪರಿಣಾಮವು ಆಹಾರ ಶುದ್ಧಿ ಮತ್ತು ಚಿತ್ತವೃತ್ತಿಗಳಡಗುವುದರಿಂದ ಉಂಟಾಗುವದು ಕೇವಲ ಬಸವಣ್ಣನವರ ಬೋಧೆಯನ್ನು ಅನುಷ್ಠಾನ ಮಾಡಿದರೆ ಸಾಧ್ಯವೆಂದು ಬೇರೆ ಹೇಳಬೇಕಿಲ್ಲ. ಅನುಭಾವ ಎಂದರೆ ನಾಮಸ್ಮರಣೆ.

## ೪. ಅನುಭಾವವಿಲ್ಲದೆ ಅರಿಯಬಾರದು

ಈ ವಾಕ್ಯದಲ್ಲಿರುವ 'ಅರಿಯಬಾರದು' ಎಂಬ ಕ್ರಿಯಾಪದವು ಸಕರ್ಮಕ ಕ್ರಿಯಾಪದವು. ಈ ಕ್ರಿಯೆಯ ವಿಷಯವಾವುದೆಂದು ಕೇಳಿದರೆ ಅಧ್ಯಾತ್ಮಶಾಸ್ತ್ರದಲ್ಲಿ ತಾನು (ಆತ್ಮ) ಹಾಗೂ ಇದಿರು (ಬ್ರಹ್ಮ) ಎಂಬ ಉತ್ತರವುಂಟು. ಈ ವಸ್ತು ಗ್ರಹಣವಾಗಬೇಕಾದರೆ ಗ್ರಹಣಕ್ಕೆ ಸಾಧನ ಅಥವ ಪ್ರಮಾಣವಾಗಿರುವುದು ಬೇಕು ಎಂಬುದಕ್ಕೆ ಉತ್ತರರೂಪವಾಗಿ ಅನುಭಾವ ಎಂಬ ಬೇರೊಂದು ಪದವು ಈ ವಾಕ್ಯದಲ್ಲಿ ಬಳಸಲ್ಪಟ್ಟಿರುತ್ತದೆ. ಅನುಭಾವವಿಲ್ಲದೆ ಅಂದರೆ ಅರಿಯಬೇಕಾದ ವಸ್ತುವನ್ನು ಅರಿತುಕೊಳ್ಳಲು ಬೇಕಾದ ಪ್ರಮಾಣವಿಲ್ಲದೆ ಎಂದು ಅರ್ಥವಾಗುತ್ತದೆ. ಅರಿಯಬೇಕಾದರೆ ಅನುಭಾವವೆಂಬುದು ಅನಿವಾರ್ಯ. ಅರಿವ ಕ್ರಿಯೆ, ಅರಿತುಕೊಳ್ಳುವವ

ಮತ್ತು ಅರಿವಕ್ರಿಯೆಯು ವಸ್ತು ಇವು ತ್ರಿಪುಟಿ. ಇವುಗಳಲ್ಲಿ ಒಂದು ಇಲ್ಲದಿದ್ದರೆ ಈ ಕಾರ್ಯ ನೆರವೇರಲಾರದು. ಆದುದರಿಂದ ಅರಿವಕ್ರಿಯೆ ನಡೆಯಬೇಕಾದರೆ ಸಹಾಯಕ ಕರ್ಮವಾದ ಅನುಭಾವವೆಂಬ ಉಪಕರಣವು ಅನಿವಾರ್ಯವಾಗಿರುತ್ತದೆ ಈ ಸಂದರ್ಭದಲ್ಲಿ. ಅನುಭಾವವಿಲ್ಲದೆ ಅಂದರೆ ಉಪ-ಕರಣ. ಸಾಧನ ಇಲ್ಲವೆ ಪ್ರಮಾಣವಿಲ್ಲದೆ ಎಂದು ಆಗುತ್ತದೆಯೆಂದು ಈ ವಿವರಣೆಯಿಂದ ಸಿದ್ಧವಾಗುತ್ತದೆ. ವಸ್ತುವನ್ನು ಅರಿಯುವಂಥ ಪ್ರಮಾಣವು ಇಂದ್ರಿಯ ಆಗಿರಬಹುದು. ಮನಸ್ಸು ಆಗಿರಬಹುದು ಅಥವಾ ವಿದ್ಯೆ-ಬ್ರಹ್ಮ ಇಲ್ಲವೆ ಆತ್ಮವಿದ್ಯೆ-ಆಗಿರಬಹುದು ಎಂಬುದು ಹೆಚ್ಚಿನ ವಿವರಣೆಯಿಂದ ತಿಳಿದು ಬರುತ್ತದೆ.

**೫. ತನ್ನಲ್ಲಿ ತಾನು ಸನ್ನಿಹಿತವುಳ್ಳರೆ ಶಿವಶರಣರ ಸಂಗವೇತಕೆನಲಂಟೆ........... ಅನುಭಾವ ಮಾತಿನ ಮಥನವೆನಬಹುದೆ ?**

ತನ್ನಲ್ಲಿ ತಾನು ಸನ್ನಿಹಿತವಾಗಿರುವುದೆಂದರೆ, ಅಂತರ್ಮುಖಿಯಾಗಿ ಆತ್ಮ ನಿರೀಕ್ಷಣೆಮಾಡುವುದು; ಅಲ್ಲದೆ ತನ್ನಲ್ಲಿರುವ ಶಕ್ತಿಯನ್ನು ಉದ್ಧರಿಸಿ-ಮೇಲಕ್ಕೆತ್ತಿ, ಆದರಿಂದ ಆತ್ಮೋನ್ನತಿಮಾರ್ಗಗಾಮಿಯಾಗಿ ಧರ್ಮನಾಳ ಅಥವಾ ವೃಷಭನಾಳ ಇಲ್ಲವೆ ಬ್ರಹ್ಮನಾಳಮುಖೇನ ಉನ್ಮಾರ್ಗಗಾಮಿಯಾಗಿ ಅಧೋಮುಖದ ಬಾಗಿಲನ್ನು ಬಲಿದಿರುವುದು. ಇದು ಬಾಹ್ಯ ಬ್ರಹ್ಮವನ್ನು ಮರೆತು ಅಂತಃಬ್ರಹ್ಮವಾಗಿ ಪರಿಣಾಮ ಗೊಳ್ಳುವುದು. ಇದನ್ನು ಬಸವಣ್ಣನವರು ಪ್ರಾಣಲಿಂಗಾನುಭಾವವಿದ್ಯೆಯೆಂದು ಹೇಳಿದರು. ಇದನ್ನು ಚೆನ್ನಬಸವಣ್ಣನವರು ತಮಗೆ ಬೋಧಿಸಿದರೆಂದೂ ಅವರು ಹೇಳುತ್ತಾರೆ. ಇಲ್ಲಿ ಚೆನ್ನಬಸವಣ್ಣನವರು ಈ ಪ್ರಾಣಲಿಂಗಾನುಸಂಧಾನವನ್ನು ತನ್ನಲ್ಲಿ ತಾನು ಸನ್ನಿಹಿತವಾಗುವುದು ಎಂದು ಹೇಳಿದ್ದಾರೆ. ಈ ವಿದ್ಯಾನಿಪುಣನಾಗಿ, ಅದರಿಂದ ಸಿದ್ಧಿಯನ್ನು ಸಂಪಾದಿಸಿದರೂ ಶರಣರಸಂಗದ ಅವಶ್ಯಕತೆಯಿರುವದೆಂಬ ಮಾತನ್ನು ತಿಳಿಸಿ ಕೇವಲ ತನ್ನಲ್ಲಿ ತಾನಿರುವುದು ಅಜ್ಞಾನ ಅಥವಾ ತನ್ನಲ್ಲಿ ತಾನಿರದೆ ಬಾಹ್ಯದಲ್ಲಿ ಇರುವುದು ಅಂದರೆ ಶರಣರ ಸಂಗದಲ್ಲಿರುವುದು ಅಜ್ಞಾನವೆಂದಂತಿದೆ. ಅಂತರಂಗದ ಅನುಭಾವಕ್ಕೆ, ಬಹಿರಂಗದಲ್ಲಿ ಶರಣರ

ಅನುಭಾವವು ಅತ್ಯಂತ ಅವಶ್ಯವಿದೆ. ಇವೆರಡರ ಸಮನ್ವಯ ಸಿದ್ಧಿ ಪ್ರತಿಪಾದನೆಯನ್ನು ಚೆನ್ನಬಸವಣ್ಣನವರು ಎತ್ತಿತೋರಿಸಿ, ಮಾತೆಂಬುದು–ಅನುಭಾವವೆಂಬುದು–ಜ್ಯೋತಿರ್ಲಿಂಗವೇ ವಿನಾ ಶಬ್ದದ ತಾರ್ಕಿಕ ವಾದವಲ್ಲವೆಂದು ಪ್ರತಿಪಾದಿಸಿದ್ದಾರೆ. ಶರಣರ ಸಂಗವೆಂಬುದನ್ನು ಸಮಯದ ಸಂಗ ಎಂದೂ, ಅದು ಅನುಭಾವ ಅಂದರೆ ಪ್ರಮಾಣ ಅಥವಾ ಸಾಧನವೆಂದೂ ಶಿವಶರಣರು ತಿಳಿಸಿದ್ದಾರೆ: ಅನುಭಾವ ಎಂಬುದು ಶಬ್ದಕ್ಕಾಗಿ ಶಬ್ದ ಬಳಸಿ ವಿವಾದವನ್ನು ಜೀವಂತವಿಡುವ ಉಪಕ್ರಮವಲ್ಲ. ಆದರೆ ಅದು ಪ್ರಮಾಣ ಹಾಗೂ ಪ್ರಮಾ ಆಗಿರುತ್ತದೆಂಬುದಿಲ್ಲಿಯ ಇಂಗಿತ.

ಚೆನ್ನಬಸವಣ್ಣನವರ ವಚನದ ಹಸಿಗೆಯಿಂದ ಚೆನ್ನಬಸವಣ್ಣನವರು ಮತಧರ್ಮ ತತ್ವಶಾಸ್ತ್ರ ಹಾಗೂ ವಸ್ತುತತ್ವಶಾಸ್ತ್ರಗಳ ಪ್ರಮಾಣಗಳೆರಡರ ವಿಚಾರವನ್ನೂ ಮಾಡಿದ್ದು ಸ್ಪಷ್ಟವಾಗುತ್ತದೆ. ಈ ವಚನದಲ್ಲಿ ಎರಡೂ ಬಗೆಯ ಪ್ರಮಾಣಗಳ ವೈವಿಧ್ಯಮಯವಾದ ಪ್ರತಿಪಾದನೆಯನ್ನು ಚೆನ್ನಬಸವಣ್ಣನವರು ಮಾಡಿದ್ದಾರೆ. ಇದು ಭಾರತೀಯ ತತ್ವಜ್ಞಾನದಲ್ಲಿ ಅವರಿಗಿರುವ ಆಳವಾದ ಪ್ರಜ್ಞೆಯನ್ನು ತೋರಿಸುವಂತೆ ಪ್ರಮಾಣಶಾಸ್ತ್ರದ ಎರಡು ಪ್ರಕಾರಗಳನ್ನೂ ತಿಳಿಸಿದ್ದಾರೆ ಎಂಬುದನ್ನೂ ಎತ್ತಿ ತೋರಿಸುತ್ತದೆ. ಭಾರತೀಯ ಪ್ರಮಾಣಶಾಸ್ತ್ರವು ಎದುರಿಸುತ್ತಿದ್ದ ಪ್ರಶ್ನೆಯನ್ನು ಭಿನ್ನಭಿನ್ನ ದೃಷ್ಟಿಕೋನದಿಂದ ಅರಿಯುವ ಪ್ರಯತ್ನವಿಲ್ಲಿದ್ದು, ಭಿನ್ನಭಿನ್ನವಾಗಿ ಪರಿಹರಿಸಿದ ಉದಾಹರಣೆಯೂ ಇಲ್ಲಿದೆಯೆಂದು ಬೇರೆ ಹೇಳಬೇಕಿಲ್ಲ. ಚೆನ್ನಬಸವಣ್ಣನವರ ಈ ವಚನದ ಹಸಿಗೆಯಿಂದ ಅನುಭಾವ ಶಬ್ದದ ತಾತ್ವಿಕ, ತಾರ್ಕಿಕ ಸ್ವರೂಪದ ಕೊನೆಯ ಘಟ್ಟವನ್ನು ತಲುಪಿದಂತಾಗಿದೆಯೆಂದು ನನ್ನ ಭಾವನೆ. ಇನ್ನುಮೇಲೆ ಅನುಭಾವ ಶಬ್ದದ ವಿಶೇಷವಾದ ಶಾಸ್ತ್ರಅಧ್ಯಯನದಿಂದ ಅದರ ಪ್ರಮಾ ಶಾಸ್ತ್ರರೀತಿಯ ಲಕ್ಷಣಗಳನ್ನು ಕುರಿತು ಪರಿಶೀಲಿಸಬಹುದು.

## ಅಡಿಟಿಪ್ಪಣಿ

೧. ಶ್ವೇತಾಶ್ವತರೋಪನಿಷತ್ತು ೧. ೩; ಋಗ್ವೇದ–ನಾಸದೀಯ ಸೂಕ್ತ.
೨. ಸ್ವತಂತ್ರ ಸಿದ್ಧಲಿಂಗ, ಸ್ವತಂತ್ರ ಸಿದ್ಧಲಿಂಗೇಶ್ವರ ವಚನ.
೩. ಮಹಾದೇವಿಯಕ್ಕನ ವಚನಗಳು.
೪. ಪ್ರೊ॥ ಎಸ್. ಎಸ್. ಬಸವನಾಳ (ಸಂ). ಬಸವಣ್ಣನವರ ವಚನಗಳು, ಎಲ್. ಇ. ಅಸೋಸಿಯೇಶನ್, ಧಾರವಾಡ–೧೯೬೨.

೫.

೬. Chandrodaya Bhattacharya: Elements of Indian Logic and Epistemology, p. 4, Modern Book Agency Pvt. Ltd. 1966.

೭. S. C. Vidybhushan : History of Indian Logic, p. 395 Motilal Baharasidas, 1971.

೮. Kari. H. Potter : Padarthatattvanirupanam of Raghunath Siromani, p. 95. Harvard Teaching Institute, 1957.

೯. Ibid, p. 67.

೧೦. Esther. A. ; A Problem of Truth and Reality, p. 522. and 524.

೧೧. Bisayanandakar, The Theories of Error in Indian Philosophy p. 61. Ajanta Publication, 1978.

೧೨. ".. But, besides the mere authority of scripture another source of knowledge is sometimes recognised, which is called saksatkara or Anubhava, both of which terms may be translated as intuition." Hinduism and Pluralism as found in the Upanisads, Harrison, M. H. p. 62

೧೩. Dr. K. A. S. Iyer : Bharthari, pp 83-87 Deccan College, Poona, 1969.

೧೪. ಪ್ರೊ. ಎಸ್. ಎಸ್. ಬಸವನಾಳ (ಸಂ); ಬಸವಣ್ಣನವರ ವಚನಗಳು. ವ. ೨೪೩ ಎಲ್. ಇ. ಅಸೋಸಿಯೇಶನ್, ಧಾರವಾಡ-(೧೯೬೨).

೧೫. ಪ್ರೊ. ಎಸ್. ಎಸ್. ಬಸವನಾಳ (ಸಂ), ಅದೇ, ವ. ೨೯೮.

೧೬. ಪ್ರೊ. ಎಸ್. ಎಸ್. ಬಸವನಾಳ(ಸಂ). ಅದೇ ವ ೨೧೨.

೧೭. Max Muller, History of Ancient Samskrt Literature, p. 11. Major Basu Bhuvanesvari Asram, Allahabad 1859.

೧೮. ಶಿವಾನುಭವ ಶಾಸ್ತ್ರವು. ಮುನ್ನುಡಿ

# ವೀರಶೈವದರ್ಶನ ಮೀಮಾಂಸೆ

## ಸ. ೪ ನ್ನು ಕುರಿತು

ವೇದಕಾಲದ ಋಷಿ–ಮುನಿಗಳು ಅರಣ್ಯಗಳಲ್ಲಿ, ಆಶ್ರಮಗಳಲ್ಲಿ ನಡೆಯಿಸಿದ ಆಧ್ಯಾತ್ಮ ತತ್ತ್ವ ಜಿಜ್ಞಾಸೆಯುನ್ನು ಆರಣ್ಯಕ-ಉಪನಿಷತ್ತುಗಳಲ್ಲಿ ನಾವಿಂದುಕಾಣುವಂತೆ, ಹನ್ನೆರಡನೆಯ ಶತಮಾನದ ಶಿವಶರಣರು ಅನುಭವ ಮಂಟಪದಲ್ಲಿ ನಡೆಯಿಸಿದ ತತ್ತ್ವಜಿಜ್ಞಾಸೆಯುನ್ನು ವಚನಶಾಸ್ತ್ರದಲ್ಲಿ ಕಾಣುವಂತಾಗಿದೆ. “ವಚನೋಪನಿಷತ್ತು” “ವಚನಾಗಮ” ವೆಂದು ಹೆಸರಾಂತ ವಚನಶಾಸ್ತ್ರವು ‘ಕನ್ನಡವು ಸಂಸ್ಕೃತದ ಪಡಿನೆಳಲು’ ಎಂದು ಕನ್ನಡಕ್ಕಿದ್ದ ಕಳಂಕವನ್ನು ತೊಡೆದು ಕನ್ನಡಕ್ಕೆ ತನ್ನದೇ ಆದ ಮೌಲಿಕತೆಯುನ್ನು ತಂದಿತ್ತ ಹಿರಿಮೆ ವಚನಶಾಸ್ತ್ರದ್ದು ! ಅದು ಕನ್ನಡಕ್ಕೆ ಮೌಲಿಕತೆಯ ಮೆರುಗಿತ್ತ ಮರುಜೀವಣಿ!

ಡಾ. ವ್ಹಿ. ಎಸ್. ಕಂಬಿ ಅವರು ತತ್ತ್ವಶಾಸ್ತ್ರದ ದಿಸೆಯಲ್ಲಿ ನಡೆಯಿಸುತ್ತಿರುವ ಪ್ರಯತ್ನ ಮತ್ತು ಸಾಧನೆಗಳು ಮನನೀಯ. ಈಗಾಗಲೇ ಅವರು ‘ವೀರಶೈವದರ್ಶನ ಮೀಮಾಂಸೆ ೧ (೧೯೭೩),೨ (೧೯೭೪) ೩ (೧೯೭೬) ‘ಚಾಮರಸನ ಅಮನಸ್ಕ ಕಾವ್ಯ’ (೧೯೮೨), ಭಕ್ತಿಯೋಗ (೧೯೭೫), Philosophy of the Sunyasampadane Vol. I (1973), Forms of Indian Philosophical literature and other papers(1982) ದಿಙ್ನಾಗ (೧೯೭೦), ಶೂನ್ಯಸಂಪಾದನೆ ಒಂದು ಸಮೀಕ್ಷೆ (೧೯೬೯), ಮುಂತಾದ ಗ್ರಂಥಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಇದೀಗ ಅವರು “ವಚನ ಸಾಹಿತ್ಯವು ಒಂದು ದರ್ಶನ” ಎಂದು ಸಿದ್ಧಪಡಿಸುವ ದಿಸೆಯಲ್ಲಿ ತಮ್ಮ

ವಿಚಾರಧಾರೆಯನ್ನು ಹರಿಸಿದ್ದಾರೆ. ಪ್ರಸ್ತುತ ಕೃತಿ "ವೀರಶೈವದರ್ಶನ ಮೀಮಾಂಸೆ ಸಂ. ೪" ಎಂಬುದರಲ್ಲಿ ೧) ವಚನಸಾಹಿತ್ಯವು ದರ್ಶನ ಸಾಹಿತ್ಯವೆ ? ೨) ವೀರಶೈವ ಸಾಹಿತ್ಯ ಮತ್ತು ಶಾಸ್ತ್ರಸಾಹಿತ್ಯ ೩) ವಚನ ಸಾಹಿತ್ಯ ಮತ್ತು ಪ್ರಮಾಣವಿಚಾರ, ೪) ಸಂಪಾದನೆ ಮತ್ತು ಪ್ರಸಂಗ ಪದಗಳ ಪರಿಚಯ ಮತ್ತು (೫) 'ವಚನಗಳಲ್ಲಿ' 'ಅನುಭಾವ' ಪದದ ಆನ್ವೀಕ್ಷಿಕೀ ರೀತಿಯ ಒಂದು ಪರಿಶೀಲನೆ' ಎಂಬ ಪಂಚಮುಖಗಳಲ್ಲಿ ಕೂಲಂಕಷವಾಗಿ ವಿಶ್ಲೇಷಿಸಿರುವ ಈ ಪುಟ್ಟ ಹೊತ್ತಿಗೆ. ಹೊತ್ತಿಗೆ ಪುಟ್ಟದಾದರೂ ವಿಚಾರ ಪರಿಶೀಲನೆಯ ವಿವಿಧ ರೀತಿಗಳ ರಸಗಟ್ಟಿ ಇದು.

ಡಾ. ಕಂಬಿಯವರು ತಮ್ಮ ವಿಶ್ಲೇಷಣೆಗೆ ಬಳಸಿಕೊಂಡಿರುವ ವಿವಿಧ ಭಾಷೆಯ ವಿದ್ವಾಂಸರ ವಿಚಾರ ಸರಣಿಗಳು ಅಡಿಟಿಪ್ಪಣಿಗಳಲ್ಲಿ ಮೂಡಿಬಂದು, ಶ್ರೀಯುತರು ಈ ದಿಶೆಯಲ್ಲಿ ನಡೆಯಿಸಿರುವ ವ್ಯವಸಾಯ ವೈಶಾಲ್ಯಕ್ಕೆ ಹಿಡಿದ ಕನ್ನಡಿ.

'ಅನುಭಾವವೆಂಬುದು ಆತ್ಮವಿದ್ಯೆ', 'ಅನುಭಾವವೆಂಬುದು ತಾನಾರೆಂಬುದ ತೋರಿಸುವುದು' ಎಂದು ಶರಣರು ಹೇಳುತ್ತಾರೆ. 'ಆತ್ಮ ಆತ್ಮ ಮಥನಿಸಿ ಅನುಭಾವ ಹುಟ್ಟಿ ತನುಗುಣಗಳ ಸುಡಲಾಯಿತ್ತು' (ಪು. ೪೫). 'ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ...ಕೂಡಲಸಂಗನ ಶರಣರ ಅನುಭಾವದಿಂದ ಎನ್ನ ಮನದ ಕೇಡ ನೋಡಯ್ಯ' (ಪು. ೪೬) ಎಂದು ಉದ್ಧರಿಸುತ್ತ ಅನುಭಾವವೆಂಬ ಮಹಾಜ್ಯೋತಿಜ್ಞಾನದಿಂದಲೇ ಅಮನಸ್ಕಸಿದ್ಧಿ ಎಂಬುದನ್ನು ತಿಳಿಸಿ, ಅನುಭಾವಕ್ಕಿರುವ ಅರ್ಥವ್ಯಾಪ್ತಿಯನ್ನು ಸೂಚಿಸಿದ್ದಾರೆ. ಇವರ ವಿಚಾರಧಾರೆ ಅನುಭಾವವನ್ನು ತತ್ತ್ವ, ಭಕ್ತಿ, ಮತ್ತು ವಿಜ್ಞಾನಗಳಲ್ಲಿ ವಚನಕಾರರು ಬಳಸಿರುವುದನ್ನು ಎತ್ತಿ ತೋರಿಸಿದೆ, ಅದರ ಸ್ಥಾನಮಾನವನ್ನು, ಕಾರ್ಯ ಕ್ಷೇತ್ರವನ್ನು ನಿರ್ಣಯಿಸಿದೆ "ಅನುಭವ ಅಥವಾ ಅನುಭಾವವು ವಾದವಿದ್ಯಾ (ಆನ್ವೀಕ್ಷಿಕೀ) ತತ್ತ್ವಗಳಲ್ಲಿ ಒಂದು" ಎಂಬ ಮಾತು ಶ್ರೀಯುತರ ದಾರ್ಶನಿಕ ಪ್ರಕ್ರಿಯೆಯನ್ನು ನೆನಪಿಸುತ್ತದೆ. ಈ ದಿಸೆಯಲ್ಲಿ ಅನುಭಾವಕ್ಕೆ ನವದ್ವೀಪದ ನ್ಯಾಯಪಂಥ ನಿರ್ಮಾಪಕರಾದ ರಘುನಾಥ

ಶಿರೋಮಣಿಯವರ ಸಮ್ಮತಿಯನ್ನು ಸೂಚಿಸಲಾಗಿದೆ. 'ಅನುಭಾವವೆಂದರೆ ಪ್ರತ್ಯಕ್ಷ' ಎಂಬುದು ಆತನ ಪ್ರತಿಪಾದನೆಯೆಂದಿದ್ದಾರೆ.

ಅನ್ನಂಭಟ್ಟನ ತರ್ಕಸಂಗ್ರಹ, ಲೌಗಾಕ್ಷಿ ಭಾಸ್ಕರನ ತರ್ಕಕೌಮುದಿ ಮುಂತಾದ ಗ್ರಂಥಗಳಲ್ಲಿನ ದಾರ್ಶನಿಕ ಸಮಾನಾರ್ಥಗಳು ಇಲ್ಲಿ ಗಮನಿಸ ತಕ್ಕವು.

ವೀರಶೈವದರ್ಶನವು ಪ್ರತ್ಯಕ್ಷ, ಅನುಮಾನ, ಶಬ್ದ ಮತ್ತು ಅರ್ಥಾಪತ್ತಿ ಎಂಬ ನಾಲ್ಕು ಪ್ರಮಾಣಗಳನ್ನು ಬಳಸಿರುವುದನ್ನು ಸಮರ್ಥಿಸಿರುವ ಶ್ರೀ ಕಂಬಿಯವರು 'ಅನುಭವ' ಶಬ್ದವು 'ಪ್ರಮಾ' ಎಂಬ ಅರ್ಥದಲ್ಲಿ ಬಳಸಿರುವು ದನ್ನು (ಪು. ೫೩) ತೋರಿಸಿ, ಅದಕ್ಕೆ ಬಸವಣ್ಣನವರ ವಚನವನ್ನು ನಿದರ್ಶಿಸ ಲಾಗಿದೆ (ಪು.೫೪).

'ಅನುಭಾವವಿಲ್ಲದವನ ಭಕ್ತಿ ಅನುವಿಂಗೆ ಬಾರದು' ಎಂದು ಉದ್ಧರಿಸಿ ಶಿವಾನುಭವ ಸೂತ್ರದಲ್ಲಿ ಹೇಳಿರುವ 'ಅಕಾರೋಲಿಂಗಮೋಪ್ರೋಕ್ತಂ'(ಪು.೫೭) ಎಂಬ ಕಾರಿಕೆಯನ್ನು ಉದಾಹರಿಸಿ ಪಂಚಾಕ್ಷರ ಮಹಾಮಂತ್ರದ ನಿರ್ವಚನ ವನ್ನು ಅನುಭಾವಕ್ಕೆ ಸಾಧಿಸಿರುವುದು ತುಂಬಾ ಮಹತ್ವದ್ದಾಗಿದೆ.

ವೀರಶೈವ ಪಾರಿಭಾಷಿಕ ಪದಗಳೆನಿಸಿರುವ 'ಸ್ಥಲ ಕಟ್ಟು, ಸಂಪಾದನೆ, ಶೂನ್ಯಸಂಪಾದನೆ, ಶೀಲಸಂಪಾದನೆ" ಮುಂತಾದ ಪದಗಳಿಗೆ ವಿಶೇಷಾರ್ಥ ವಿರುವದನ್ನು ವಿವರಿಸುವದಿಸೆಯಲ್ಲಿ "ಸ್ಥಲಕಟ್ಟು" ಎಂಬ ಪದವು "ಬ್ರಹ್ಮ ಸೂತ್ರ" ಎಂಬ ಅರ್ಥದಲ್ಲಿದೆ ಎಂದು ದಾರ್ಶನಿಕವಾಗಿ ಸಮರ್ಥಿಸಿರುವಲ್ಲಿ (ಪು. ೨೨) ಸ್ಥಲ ಎಂದರೆ ಬ್ರಹ್ಮ, ಕಟ್ಟು ಎಂದರೆಸೂತ್ರ ಎಂಬ ವಿಚಾರವು ಬಹುಸ್ವಾರಸ್ಯವಾಗಿದೆ.

ಹೀಗೆ ಡಾ. ಕಂಬಿಯವರು ಈ ದಿಸೆಯಲ್ಲಿ ಮಾಡುತ್ತಿರುವ ಪ್ರಯತ್ನ ಅಭಿನಂದನೀಯ. ಸಾಮಾನ್ಯ ಓದುಗರಿಗೆ ತತ್ತ್ವವಿಚಾರಗಳಲ್ಲಿ ಒಲುಮೆ ಕಡಿಮೆ. ಅದರಲ್ಲಿಯೂ ದಾರ್ಶನಿಕ ವಿಶ್ಲೇಷಣೆ ಕೂದಲನ್ನು ಶೀಳಿ ಪರೀಕ್ಷಿಸು

ವಷ್ಟು ಗಹನವಿಚಾರ. ಅತಿ ಕಡಿಮೆ ಜಿಜ್ಞಾಸುಗಳಿಗೆ ಮಾತ್ರ ಕುತೂಹಲವನ್ನು ಕೆರಳಿಸುವ ಇಂಥವಿಚಾರದಲ್ಲಿ ತಾಳ್ಮೆಯಿಂದ ಅಡಿಯಿಡುತ್ತಿರುವ ಪ್ರಯತ್ನಶೀಲರಾದ ಶ್ರೀಯುತರು ಅಭಿವಂದ್ಯರು. ಅವರ ಕೃತಿಗಳು ಕನ್ನಡ ಲೋಕದಲ್ಲಿ ಚಿರಕಾಲವುಳಿಯತಕ್ಕವು. ಕನ್ನಡ ಜನ ಈ ಮಟ್ಟಕ್ಕೆ ಏರಿ ಕನ್ನಡದ ಮತ್ತು ತಮ್ಮ ಏಳ್ಗೆಯನ್ನು ಸಾಧಿಸಲಿ.

. ಎಂ. ಜಿ. ನಂಜುಂಡಾರಾಧ್ಯ

# ಅಭಿಪ್ರಾಯಗಳು

ವೀರಶೈವ ಪಾರಿಭಾಷಿಕ ಪದಗಳೆನಿಸಿರುವ "ಸ್ಥಲಕಟ್ಟು, ಸಂಪಾದನೆ, ಶೂನ್ಯ ಸಂಪಾದನೆ. ಶೀಲಸಂಪಾದನೆ" ಮುಂತಾದ ಪದಗಳಿಗೆ ವಿಶೇಷಾರ್ಥವಿರುವದನ್ನು ವಿವರಿಸುವದಿಸೆಯಲ್ಲಿ "ಸ್ಥಲಕಟ್ಟು" ಎಂಬ ಪದವು "ಬ್ರಹ್ಮಸೂತ್ರ" ಎಂಬ ಅರ್ಥ ದಲ್ಲಿದೆ ಎಂದು ದಾರ್ಶನಿಕವಾಗಿ ಸಮರ್ಥಿಸಿರುವಲ್ಲಿ (ಪು.೨೨) ಸ್ಥಲ ಎಂದರೆ ಬ್ರಹ್ಮ, ಕಟ್ಟು ಎಂದರೆಸೂತ್ರ ಎಂಬ ವಿಚಾರವು ಬಹುಸ್ವಾರಸ್ಯವಾಗಿದೆ.

ಹೀಗೆ ಡಾ. ಕಂಬಿಯವರು ಈ ದಿಸೆಯಲ್ಲಿ ಮಾಡುತ್ತಿರುವ ಪ್ರಯತ್ನ ಅಭಿ ನಂದನೀಯ. ಸಾಮಾನ್ಯ ಓದುಗರಿಗೆ ತತ್ತ್ವವಿಚಾರಗಳಲ್ಲಿ ಒಲುಮೆ ಕಡಿಮೆ. ಅದರಲ್ಲಿಯೂ ದಾರ್ಶನಿಕ ವಿಶ್ಲೇಷಣೆ ಕೂದಲನ್ನು ಶೀಳಿ ಪರೀಕ್ಷಿಸುವಷ್ಟು ಗಹನ ವಿಚಾರ. ಅತಿಕಡಿಮೆ ಜಿಜ್ಞಾಸುಗಳಿಗೆ ಮಾತ್ರ ಕುತೂಹಲವನ್ನು ಕೆರಳಿಸುವ ಇಂಥ ವಿಚಾರದಲ್ಲಿ ತಾಳ್ಮೆಯಿಂದ ಅಡಿಯಿಡುತ್ತಿರುವ ಪ್ರಯತ್ನಶೀಲರಾದ ಶ್ರೀಯುತರು ಅಭಿವಂದ್ಯರು. ಅವರ ಕೃತಿಗಳು ಕನ್ನಡ ಲೋಕದಲ್ಲಿ ಚಿರಕಾಲವುಳಿಯುತಕ್ಕವು. ಕನ್ನಡ ಜನ ಈ ಮಟ್ಟಕ್ಕೆ ಏರಿ ಕನ್ನಡದ ಮತ್ತು ತಮ್ಮ ಏಳ್ಗೆಯನ್ನು ಸಾಧಿಸಲಿ.

ಎಂ. ಜಿ. ನಂಜುಂಡಾರಾಧ್ಯ

ಪ್ರತಿ ಪ್ರಬಂಧದಲ್ಲೂ ಅವರಿಗಿರುವ ವೀರಶೈವ ಪಾರಿಭಾಷಿಕ ಕಲ್ಪನೆಗಳ ಗಾಢ ಪರಿಚಯು ಹಾಗು ತತ್ತ್ವಶಾಸ್ತ್ರದ ಪರಿಶೀಲನಾ ಪ್ರಕ್ರಿಯೆಯ ಪೂರ್ಣ ಪರಿಜ್ಞಾನ ಗಳು ಅಭಿವ್ಯಕ್ತವಾಗಿತ್ತವೆ. ನಿಜವಾಗಿ ವೀರಶೈವ "ಅನುಭಾವ"ದ "ಪ್ರಸಂಗ"ದ ಮಹಿಮೆಯನ್ನು ನಾವು ಪೂರ್ಣವಾಗಿ ತಿಳಿಯಲು ಡಾ. ಕಂಬಿಯವರಂತಹ ತತ್ತ್ವ ಶಾಸ್ತ್ರ ಪರಿಣತರು ಹೆಚ್ಚು ಹೆಚ್ಚಾಗಿ ಕನ್ನಡದಲ್ಲಿ ವಿಚಾರಗಳನ್ನು ವ್ಯಕ್ತಪಡಿಸಬೇಕು. ಇಂತಹ ಸತ್‌ಪ್ರಯತ್ನಕ್ಕೆ ನಾಡಿನ ವಿದ್ಯಾವಂತರು ಎಲ್ಲ ಪ್ರೋತ್ಸಾಹ ನೀಡಲೆಂದು ಹಾರೈಸುತ್ತೇನೆ,

ಡಾ. ಕೆ. ಕೃಷ್ಣಮೂರ್ತಿ